| 15 | ವೇಣುಪ್ರಸಾದ್ ಜಿ ಬಿನ್ ಗೋವಿಂದಚಾರಿ | ಸ್ಟೇಡಿಯಂ ಬಡಾವಣೆ | 18 | ಎಸ್.ಟಿ | ಪಿಯುಸಿ | 20000 | 984406[illegible] |
|---|---|---|---|---|---|---|---|
| 16 | ವರುಣ್ ಬಿನ್ ಶಿವರಾಂ ಕೆ. ಎನ್ | ಸ್ಟೇಡಿಯಂ ಬಡಾವಣೆ | 19 | ಇತರೆ | ಪಿಯುಸಿ | 20000 | 8942563580 |
| 17 | ರೋಹಿತ್ ಬಿನ್ ಚಂದ್ರೇಗೌಡ | ಸ್ಟೇಡಿಯಂ ಬಡಾವಣೆ | 22 | ಇತರೆ | ಎಂಕಾಂ | 11800 | 9663066564 |
| 18 | ಕಿರಣ್ ಕುಮಾರ್ ಕೆ ಬಿನ್ ಕಾಳಾಚರಿ | ವಿಶ್ವನಾಥಯ್ಯ ಕಾಲೋನಿ | 23 | ಇತರೆ | ಎಸ್.ಎಸ್.ಎಲ್ ಸಿ | 15000 | 9900150386 |
| 19 | ಗಣೇಶ ಎಂ ಬಿನ್ ಮಾದ | ಪಿಕೆ ಕಾಲೋನಿ | 32 | ಆಧಿ ದ್ರಾವಿಡ | 9ನೇ ತರಗತಿ | 15000 | 9972120854 |
| 20 | ನಂಜುಂಡ ಪಿ ಬಿನ್ ಪಳನಿ | ಪಿ ಕೆ ಕಾಲೋನಿ | 32 | ಆಧಿ ದ್ರಾವಿಡ | ಎಸ್.ಎಸ್.ಎಲ್ ಸಿ | 15000 | 7996990664 |

**2017–18 ನೇ ಸಾಲಿಗೆ ಡೇ ನಲ್ಮ್ ಯೋಜನೆಯಡಿ ಲಘು ವಾಹನ ಚಾಲನಾ ತರಬೇತಿಗಾಗಿ ಆಯ್ಕೆ ಆಗಿರುವ ಫಲಾನುಭವಿಗಳ ವಿವರ ಫಲಾನುಭವಿಗಳ ಸಂಖ್ಯೆ: 16**

| ಕ್ರ.ಸಂ. | ಫಲಾನುಭವಿಗಳ ಹೆಸರು | ವಿಳಾಸ | ವಯಸ್ಸು | ಜಾತಿ | ವಿದ್ಯಾರ್ಹತೆ | ವರಮಾನ | ದೂರವಾಣಿ |
|---|---|---|---|---|---|---|---|
| 01 | ಸಂದೇಶ್ ಹೆಚ್.ಪಿ ಬಿನ್ ಬೆಟ್ಟಯ್ಯ ಕೋಟೆ | ಸಿದ್ದಪ್ಪಾಜಿ ರಸ್ತೆ | 32 | ಎಸ್.ಸಿ | ಪಿಯುಸಿ | 11000 | 9480429521 |
| 02 | ಚಂದ್ರ ಆರ್. ಬಿನ್ ರಂಗನಾಯಕ | ಕಾಳಿದಾಸ ರಸ್ತೆ | 23 | ಎಸ್.ಟಿ. | ಎಸ್.ಎಸ್.ಎಲ್ ಸಿ | 15000 | 9980249100 |
| 03 | ಶ್ರೀನಿವಾಸ್ ಎಸ್. ಬಿನ್ ಸಣ್ಣಪ್ಪನಾಯಕ | ಹನುಮಂತನಗರ | 22 | ಎಸ್.ಟಿ | ಪಿಯುಸಿ | 20000 | 9071153190 |
| 04 | ರಘುನಾಯಕ ಬಿನ್ ರಾಮನಾಯಕ | ಹನುಮಂತನಗರ | 21 | ಎಸ್.ಟಿ | ಎಸ್.ಎಸ್.ಎಲ್ ಸಿ | 16000 | 7353186470 |
| 05 | ಹೆಚ್.ಆರ್. ರಾಕೇಶ್ ಶರ್ಮ ಬಿನ್ ರಾಮಕೃಷ್ಣ | ಕೆ.ಹೆಚ್. ಬಿ ಕಾಲೋನಿ | 31 | ಎಸ್.ಸಿ | ಪಿಯುಸಿ | 16000 | 9535689589 |
| 06 | ರಾಜಮೂರ್ತಿ ಬಿನ್ ಕೃಷ್ಣನಾಯಕ | ಹನುಮಂತನಗರ | 23 | ಎಸ್.ಟಿ | ಎಸ್.ಎಸೆಲ್ ಸಿ | 25000 | 8971151556 |
| 07 | ನಿಂಗರಾಜು ಬಿನ್ ಚೆಲುವರಾಜು | ಹನುಮಂತನಗರ | 25 | ಎಸ್.ಟಿ | ಎಸ್.ಎಸ್.ಎಲ್ ಸಿ | 16000 | 9611855519 |
| 08 | ರಂಗಸ್ವಾಮಿ ಎನ್ ಬಿನ್ ನಿಂಗಶೆಟಿ | ವಿಶ್ವನಾಥಯ್ಯ ಕಾಲೋನಿ | 39 | ಇತರೆ | ಪಿಯುಸಿ | 18000 | 9739081649 |
| 09 | ನಂಜಯ್ಯ ಬಿನ್. ಮಲೆನಿಂಗಯ್ಯ | ಸಿದ್ದಪ್ಪಾಜಿ ರಸ್ತೆ | 37 | ಎಸ್.ಸಿ | ಎಸ್.ಎಸ್.ಎಲ್ ಸಿ | 20000 | 7090477098 |
| 10 | ಪಿ. ಮುರುಗೇಶ್ ಬಿನ್ ಪಳನಿಸ್ವಾಮಿ | ಪಿಕೆ ಕಾಲೋನಿ | 30 | ಎಸ್ ಸಿ | 8 ನೇ ತರಗತಿ | 13000 | 9900995325 |

| | | | | | | | |
|---|---|---|---|---|---|---|---|
| [illegible] | ಜಿ. ರಾಸ್ ಬಿನ್ ಲೇ: ಎಜಾಸ್ ಅಹಮದ್ | ಮುಸ್ಲಿಂ ಬ್ಲಾಕ್ | 22 | ಮುಸ್ಲಿಂ | ಎಸ್.ಎಸ್.ಎಲ್ ಸಿ | 16000 | 9066336475 |
| 12 | ಯೋಗೇಶ್ ಬಿನ್ ಚಾಮರಾಜು | ಸಿದ್ದಪ್ಪಾಜಿ ರಸ್ತೆ | 30 | ಎಸ್.ಸಿ | 7ನೇ ತರಗತಿ | 12000 | 81974220881 |
| 13 | ರಾಜಶೇಖರ್ ಪಿ ಬಿನ್ ಪುಟ್ಟಸ್ವಾಮಿ | ಪಿ ಕೆ ಕಾಲೋನಿ | 24 | ಎಸ್.ಸಿ | ಎಸ್.ಎಸ್.ಎಲ್ ಸಿ | 12000 | 88644186156 |
| 14 | ಮೋಹನ್ ಬಿನ್ ಲೇ: ಕೃಷ್ಣ | ಪಿ ಕೆ ಕಾಲೋನಿ | 25 | ಎಸ್.ಸಿ | 5ನೇ ತರಗತಿ | 15000 | 8970874994 |
| 15 | ಪ್ರತಾಪ್ ಬಿನ್ ಮಣಿ | ಪಿಕೆಕಾಲೋನಿ | 25 | ಎಸ್.ಸಿ | ಎಸ್.ಎಸ್.ಎಲ್ ಸಿ | 20000 | 7349453906 |
| 16 | ಅರುಣ್ ಕುಮಾರ್ ಬಿನ್ ನಾಗರಾಜು | ಹನುಮಂತನಗರ | 22 | ಎಸ್.ಟಿ | ಎಸ್.ಸ್.ಎಲ್ ಸಿ | 16000 | 9611577846 |

**ಕರ್ನಾಟಕ ಸರ್ಕಾರ**

ಕಂಇ 54 ಟಿಎನ್‌ಆರ್ 2018

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ:8/2/.2019

ಇಂದ:
**ಸರ್ಕಾರದ ಕಾರ್ಯದರ್ಶಿಗಳು**
ಕಂದಾಯ ಇಲಾಖೆ
ಬಹುಮಹಡಿಗಳ ಕಟ್ಟಡ
ಬೆಂಗಳೂರು.

ಇವರಿಗೆ:
**ಕಾರ್ಯದರ್ಶಿಗಳು**
ಕರ್ನಾಟಕ ವಿಧಾನ ಸಭೆ/~~ಪರಿಷತ್ತು~~
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ:** ಶ್ರೀ/~~ಶ್ರೀಮತಿ~~, ರಾಜಕುಮಾರ್ ಪಾಟೀಲ್ (ಸೇಡಂ)
ವಿಧಾನ ಸಭೆ/ ~~ಪರಿಷತ್~~ ಸದಸ್ಯರು, ಇವರ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂ: 46 ಕ್ಕೆ ಉತ್ತರ ನೀಡುವ ಬಗ್ಗೆ.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ವಿಧಾನ ಸಭೆ/ಪರಿಷತ್ ಸದಸ್ಯರಾದ ಶ್ರೀ/~~ಶ್ರೀಮತಿ~~ ರಾಜಕುಮಾರ್ ಪಾಟೀಲ್ ಇವರ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂ: 46 ಕ್ಕೆ ಉತ್ತರಗಳ ಪ್ರತಿಗಳನ್ನು ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಶ್ರೀಪತಿ ಪಿ.ಕೆ.)
ಶಾಖಾಧಿಕಾರಿ
ಕಂದಾಯ ಇಲಾಖೆ,(ವಿಪತ್ತು ನಿರ್ವಹಣೆ)

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 46

ಸದಸ್ಯರ ಹೆಸರು : ಶ್ರೀ ರಾಜ್‌ಕುಮಾರ್ ಪಾಟೀಲ (ಸೇಡಂ)

ಉತ್ತರಿಸುವವರು : ಕಂದಾಯ ಸಚಿವರು

ಉತ್ತರಿಸಬೇಕಾದ ದಿನಾಂಕ : 11.02.2019

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | ಕಲಬುರಗಿ ಜಿಲ್ಲೆಯಲ್ಲಿ ಸಂಕಷ್ಟಕ್ಕೆ ಒಳಗಾದ ರೈತರಿಗೆ ಪರಿಹಾರ ನೀಡಲು ಬಿಡುಗಡೆಯಾದ ಹಣವೆಷ್ಟು; ಎಷ್ಟು ರೈತರಿಗೆ ಪರಿಹಾರ ನೀಡಲಾಗಿದೆ; (ರೈತರ ಪಟ್ಟಿಯೊಂದಿಗೆ ವಿವರ ಒದಗಿಸುವುದು) | ಬರ ಪರಿಹಾರ ಕಾರ್ಯಗಳಿಗಾಗಿ ಕೇಂದ್ರ ಸರ್ಕಾರದಿಂದ ಅನುದಾನ ಬಿಡುಗಡೆಯಾಗದೇ ಇರುವುದರಿಂದ ಇನ್ನೂ ಕಲಬುರಗಿ ಜಿಲ್ಲೆಯ ರೈತರಿಗೆ ಪರಿಹಾರ ನೀಡಲು ಅನುದಾನ ಬಿಡುಗಡೆ ಮಾಡಿರುವುದಿಲ್ಲ. ಕೇಂದ್ರ ಸರ್ಕಾರದಿಂದ ಅನುದಾನ ಬಿಡುಗಡೆಯಾದ ನಂತರ ಬಿಡುಗಡೆ ಮಾಡಲಾಗುವುದು. |
| 2 | ಈ ಜಿಲ್ಲೆಯಲ್ಲಿ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಬಿಡುಗಡೆಯಾದ ಹಣವೆಷ್ಟು; ಎಷ್ಟು ಕಾಮಗಾರಿಗಳನ್ನು ಗುರುತಿಸಿ ಅನುಮೋದನೆ ನೀಡಲಾಗಿದೆ; ಕಾಮಗಾರಿಗಳ ಅನುಮೋದನೆಗೆ ಇರುವ ಮಾನದಂಡಗಳೇನು; (ವಿವರ ನೀಡುವುದು) | ಕೇಂದ್ರ ಸರ್ಕಾರದ ಎಸ್.ಡಿ.ಆರ್.ಎಫ್. / ಎನ್.ಡಿ.ಆರ್.ಎಫ್. ಮಾರ್ಗಸೂಚಿಯ ಪ್ರಕಾರ ಅಭಿವೃದ್ಧಿ ಕಾಮಗಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಅವಕಾಶವಿರುವುದಿಲ್ಲ. |
| 3 | ಕಾಮಗಾರಿಗಳಿಗೆ ಬಿಡುಗಡೆಯಾದ ಹಣದಲ್ಲಿ ಈವರೆಗೆ ಎಷ್ಟು ಖರ್ಚಾಗಿದೆ? (ವಿವರ ನೀಡುವುದು) | ಉದ್ಭವಿಸುವುದಿಲ್ಲ |

ಕಂಇ 54 ಟಿಎನ್‌ಆರ್ 2019

(ಆರ್.ವಿ. ದೇಶಪಾಂಡೆ)
ಕಂದಾಯ ಸಚಿವರು

**ಕರ್ನಾಟಕ ಸರ್ಕಾರ**

ಕಂಇ 58 ಟಿಎನ್‌ಆರ್ 2018

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ: 8/2/2018

**ಇಂದ:**
**ಸರ್ಕಾರದ ಕಾರ್ಯದರ್ಶಿಗಳು**
ಕಂದಾಯ ಇಲಾಖೆ
ಬಹುಮಹಡಿಗಳ ಕಟ್ಟಡ
ಬೆಂಗಳೂರು.

**ಇವರಿಗೆ:**
**ಕಾರ್ಯದರ್ಶಿಗಳು**
ಕರ್ನಾಟಕ ವಿಧಾನ ಸಭೆ/~~ಪರಿಷತ್ತು~~
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ:** ಶ್ರೀ/~~ಶ್ರೀಮತಿ~~, C. T. ರವಿ (ಚಿಕ್ಕಮಗಳೂರು)
ವಿಧಾನ ಸಭೆ/ ~~ಪರಿಷತ್~~ ಸದಸ್ಯರು, ಇವರ ಚುಕ್ಕೆ ~~ಗುರುತಿನ~~/ಗುರುತಿಲ್ಲದ
ಪ್ರಶ್ನೆ ಸಂ: 337ಕ್ಕೆ ಉತ್ತರ ನೀಡುವ ಬಗ್ಗೆ.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ವಿಧಾನ ಸಭೆ/~~ಪರಿಷತ್~~ ಸದಸ್ಯರಾದ ಶ್ರೀ/ಶ್ರೀಮತಿ C. T. ರವಿ ಇವರ ಚುಕ್ಕೆ ~~ಗುರುತಿನ~~/ಗುರುತಿಲ್ಲದ ಪ್ರಶ್ನೆ ಸಂ: 337 ಕ್ಕೆ ಉತ್ತರಗಳ ಪ್ರತಿಗಳನ್ನು ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಶ್ರೀಪತಿ ಟಿ.ಕೆ)
ಶಾಖಾಧಿಕಾರಿ
ಕಂದಾಯ ಇಲಾಖೆ,(ವಿಪತ್ತು ನಿರ್ವಹಣೆ)

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 337

ಸದಸ್ಯರ ಹೆಸರು : ಶ್ರೀ ರವಿ ಸಿ.ಟಿ. (ಚಿಕ್ಕಮಗಳೂರು)

ಉತ್ತರಿಸುವವರು : ಕಂದಾಯ ಸಚಿವರು

ಉತ್ತರಿಸಬೇಕಾದ ದಿನಾಂಕ : 11.02.2019

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | ಚಿಕ್ಕಮಗಳೂರು ಜಿಲ್ಲೆಯಲ್ಲಿ ಕಳೆದ 3 ವರ್ಷಗಳಿಂದ ಕಂದಾಯ ಇಲಾಖೆಯಿಂದ ಕುಡಿಯುವ ನೀರಿಗಾಗಿ ವೆಚ್ಚ ಮಾಡಿರುವ ಅನುದಾನವೆಷ್ಟು; (ತಾಲ್ಲೂಕುವಾರು, ವರ್ಷವಾರು ವಿವರ ಒದಗಿಸುವುದು) | 2016-17 ಮತ್ತು 2017-18 ಚಿಕ್ಕಮಗಳೂರು ಜಿಲ್ಲೆಯಲ್ಲಿ ಕಂದಾಯ ಇಲಾಖೆಯಿಂದ ಕುಡಿಯುವ ನೀರಿಗಾಗಿ ವೆಚ್ಚ ಮಾಡಲಾದ ಅನುದಾನದ ವಿವರವನ್ನು ಅನುಬಂಧದಲ್ಲಿ ನೀಡಿದೆ. 2018-19ನೇ ಸಾಲಿನಲ್ಲಿ ಜಿಲ್ಲಾ ಪಂಚಾಯತ್‌ನಿಂದ ಬಿಲ್ಲುಗಳು ಬರುವುದು ಬಾಕಿ ಇದ್ದು, ಬಂದ ನಂತರ ಅನುದಾನ ಬಿಡುಗಡೆ ಮಾಡಲಾಗುವುದು. |
| 2 | ಅದರಲ್ಲಿ ಟ್ಯಾಂಕರ್ ಮೂಲಕ ನೀರು ಸರಬರಾಜು ಮಾಡಲು ಹಾಗೂ ತುರ್ತು ಕುಡಿಯುವ ನೀರಿನ ಕಾಮಗಾರಿಗಳಿಗಾಗಿ ವಿನಿಯೋಗಿಸಿರುವ ಅನುದಾನವೆಷ್ಟು; (ತಾಲ್ಲೂಕುವಾರು, ವರ್ಷವಾರು ವಿವರ ಒದಗಿಸುವುದು) | ಟ್ಯಾಂಕರ್ ಮೂಲಕ ಕುಡಿಯುವ ನೀರು ಪೂರೈಕೆಗಾಗಿ ರೂ.864.047 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಹಾಗೂ ತುರ್ತು ಕುಡಿಯುವ ನೀರಿನ ಕಾಮಗಾರಿಗಳಿಗಾಗಿ ಕಾರ್ಯಪಾಲಕ ಅಭಿಯಂತರರು, ಗ್ರಾಮೀಣ ಕುಡಿಯುವ ನೀರು ಸರಬರಾಜು ಮತ್ತು ನೈರ್ಮಲ್ಯ ವಿಭಾಗ ಇವರಿಗೆ 2016-17ನೇ ಸಾಲಿನಲ್ಲಿ ರೂ.191.03 ಲಕ್ಷ ಹಾಗೂ 2017-18ನೇ ಸಾಲಿನಲ್ಲಿ ರೂ.89.22 ಲಕ್ಷ ಅನುದಾನ ಬಿಡುಗಡೆ ಮಾಡಲಾಗಿರುತ್ತದೆ. |
| 3 | ಚಿಕ್ಕಮಗಳೂರು ಜಿಲ್ಲೆಯಲ್ಲಿ ಟ್ಯಾಂಕರ್ ಮೂಲಕ ನೀರು ಸರಬರಾಜು ಮಾಡಿ ಸರಬರಾಜುದಾರರಿಗೆ ನೀಡಲು ಬಾಕಿ ಇರುವ ಬಿಲ್ಲಿನ ಮೊತ್ತವೆಷ್ಟು; (ವರ್ಷವಾರು ವಿವರ ಒದಗಿಸುವುದು) | ಚಿಕ್ಕಮಗಳೂರು ಜಿಲ್ಲೆಯಲ್ಲಿ 2016-17 ಮತ್ತು 2017-18ನೇ ಸಾಲಿನಲ್ಲಿ ಟ್ಯಾಂಕರ್ ಮೂಲಕ ಕುಡಿಯುವ ನೀರು ಸರಬರಾಜು ಮಾಡಿದ ಸರಬರಾಜುದಾರರಿಗೆ ಬಿಲ್ ಪಾವತಿಸಲು ಬಾಕಿ ಇರುವುದಿಲ್ಲ.<br>2018-19ನೇ ಸಾಲಿನಲ್ಲಿ ಟ್ಯಾಂಕರ್ ಮೂಲಕ ಕುಡಿಯುವ ನೀರು ಸರಬರಾಜು ಮಾಡಿದ ಬಾಬ್ತು ಪಾವತಿಸುವ ಬಗ್ಗೆ ಸೂಕ್ತ |
| 4 | ಬಿಲ್ ಬಾಕಿ ಇರಲು ಕಾರಣಗಳೇನು; ಬಾಕಿ ಇರುವ ಬಿಲ್ಲನ್ನು ಸರಬರಾಜುದಾರರಿಗೆ ಪಾವತಿಸಲು ವಹಿಸಲಾಗಿರುವ ಕ್ರಮವೇನು (ವಿವರ ಒದಗಿಸುವುದು) | ದಾಖಲೆಗಳೊಂದಿಗೆ ಜಿಲ್ಲಾಧಿಕಾರಿಗಳ ಕಛೇರಿಗೆ ಪ್ರಸ್ತಾವನೆ ಸಲ್ಲಿಸುವಂತೆ ಸಂಬಂಧಪಟ್ಟ ತಾಲ್ಲೂಕು ಪಂಚಾಯ್ತಿ, ಕಾರ್ಯನಿರ್ವಾಹಕ ಅಧಿಕಾರಿಗಳು, ತಹಶೀಲ್ದಾರರು ಹಾಗೂ ಗ್ರಾಮೀಣ ಕುಡಿಯುವ ನೀರು ಸರಬರಾಜು ಮತ್ತು ನೈರ್ಮಲ್ಯ ವಿಭಾಗ ಇವರಿಗೆ ತಿಳಿಸಲಾಗಿದೆ. |

ಕಂಇ 58 ಬಿಎಸ್‌ಆರ್ 2019

(ಆರ್.ವಿ. ದೇಶಪಾಂಡೆ)
ಕಂದಾಯ ಸಚಿವರು

**ಕರ್ನಾಟಕ ಸರ್ಕಾರ**

ಸಂಖ್ಯೆ: ಕಾಇ 44 ಎಲ್ಇಟಿ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 08.02.2019

ಇವರಿಂದ:
ಸರ್ಕಾರದ ಕಾರ್ಯದರ್ಶಿಗಳು,
ಕಾರ್ಮಿಕ ಇಲಾಖೆ,
ವಿಕಾಸಸೌಧ, ಬೆಂಗಳೂರು.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಸುನೀಲ್ ಕುಮಾರ್ ವಿ. (ಕಾರ್ಕಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 350ಕ್ಕೆ ಉತ್ತರಿಸುವ ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಸುನೀಲ್ ಕುಮಾರ್ ವಿ. (ಕಾರ್ಕಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 350ಕ್ಕೆ ಉತ್ತರಿಸುವ ಕುರಿತು ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ಜಿ.ವಿ. ಸಿದ್ಧರಾಜು)
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

ಪ್ರತಿಯನ್ನು ಮಾಹಿತಿಗಾಗಿ:

1. ಮಾನ್ಯ ಕಾರ್ಮಿಕ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು
3. ಸರ್ಕಾರದ ಉಪ ಕಾರ್ಯದರ್ಶಿ ರವರ ಆಪ್ತ ಶಾಖೆ, ಕಾರ್ಮಿಕ ಇಲಾಖೆ, ವಿಕಾಸ ಸೌಧ.
4. ಸರ್ಕಾರದ ಉಪ ಕಾರ್ಯದರ್ಶಿರವರ ಆಪ್ತ ಸಹಾಯಕರು,(ಸಮನ್ವಯ) ಕಾರ್ಮಿಕ ಇಲಾಖೆ,
5. ಪೀಠಾಧಿಕಾರಿ-7, ಸ್ವೀಮಾದ ಶಾಖೆ, ಕಾರ್ಮಿಕ ಇಲಾಖೆ, ವಿಕಾಸ ಸೌಧ.

# ಕರ್ನಾಟಕ ವಿಧಾನ ಸಭೆ

| | |
|---|---|
| 1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 350 |
| 2. ಮಾನ್ಯ ಸದಸ್ಯರ ಹೆಸರು | ಶ್ರೀ ಸುನಿಲ್‌ಕುಮಾರ್ ವಿ. (ಕಾರ್ಕಳ) |
| 3. ಉತ್ತರಿಸಬೇಕಾದ ದಿನಾಂಕ | 11/02/2019 |
| 4. ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2017-18ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವ "ಆಶಾದೀಪ" ಯೋಜನೆ ಎಂದಿನಿಂದ ಜಾರಿಗೆ ತರಲಾಗಿದೆ. | ಸರ್ಕಾರದ ಆದೇಶ ಸಂಖ್ಯೆ: ಕಾಇ 327 ಎಲ್‌ಇಟಿ 2016, ದಿನಾಂಕ: 03.07.2017 ರನ್ವಯ "ಆಶಾದೀಪ" ಯೋಜನೆಯನ್ನು ಜಾರಿಗೆ ತರಲಾಗಿದೆ. |
| ಆ) | ಸದರಿ ಯೋಜನೆಯಡಿ ಹಾಕಿಕೊಂಡ ಕಾರ್ಯಕ್ರಮಗಳೇನು; ಈ ಯೋಜನೆಯಲ್ಲಿ ಅನುಸರಿಸುತ್ತಿರುವ ಮಾನದಂಡಗಳೇನು? | ಅನುಬಂಧ-ಅ ರಲ್ಲಿ ಒದಗಿಸಿದೆ. |
| ಇ) | "ಆಶಾದೀಪ" ಯೋಜನೆಯ ಸದುಪಯೋಗ ಪಡೆಯುವಲ್ಲಿ ಇರಬೇಕಾದ ಅರ್ಹತೆ ಏನು? (ಸಂಪೂರ್ಣ ವಿವರ ಒದಗಿಸುವುದು). | ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಕ್ಕೆ ಸೇರಿದ ಕಾರ್ಮಿಕರಾಗಿರಬೇಕು.<br><br>1948 ರ ಕಾರ್ಮಿಕರು ರಾಜ್ಯ ವಿಮಾ ಕಾಯ್ದೆ, ಮತ್ತು 1952 ರ ಕಾರ್ಮಿಕರ ಭವಿಷ್ಯ ನಿಧಿ ಮತ್ತು ಇತರೆ ಪ್ರಾವಧಾನಗಳ ಕಾಯ್ದೆಗಳು ಅನ್ವಯವಾಗುವ ಸಂಸ್ಥೆಗಳಲ್ಲಿ ಪ್ರಪ್ರಥಮವಾಗಿ ಉದ್ಯೋಗ ಪಡೆಯುವ ನೌಕರರಾಗಿರಬೇಕು. |

ಸಂಖ್ಯೆ: ಕಾಇ 44 ಎಲ್‌ಇಟಿ 2019

(ವೆಂಕಟರಮಣಪ್ಪ)
ಕಾರ್ಮಿಕ ಸಚಿವರು

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಸುನೀಲ್ ಕುಮಾರ್ ವಿ. (ಕಾರ್ಕಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 350 ಕ್ಕೆ ಉತ್ತರ

ಅನುಬಂಧ-ಅ

| ಆ) | ಸದರಿ ಯೋಜನೆಯಡಿ ಹಾಕಿಕೊಂಡ ಕಾರ್ಯಕ್ರಮಗಳೇನು; ಈ ಯೋಜನೆಯಲ್ಲಿ ಅನುಸರಿಸುತ್ತಿರುವ ಮಾನದಂಡಗಳೇನು? | ವ್ಯಾಖ್ಯಾನ:<br><br>**1)ಖಾಸಗಿ ವಲಯದ ಉದ್ದಿಮೆ:** ಯಾವ ಖಾಸಗಿ ವಲಯದ ಉದ್ದಿಮೆಗೆ ಕಾರ್ಮಿಕರ ರಾಜ್ಯ ವಿಮಾ ಕಾಯ್ದೆ, 1948 ಹಾಗೂ ಕಾರ್ಮಿಕರ ಭವಿಷ್ಯ ನಿಧಿ ಮತ್ತು ಇತರೆ ಪ್ರಾವಧಾನಗಳ ಕಾಯ್ದೆ, 1952 ಅನ್ವಯಿಸುತ್ತದೆಯೋ ಅಂತಹ ಸಂಸ್ಥೆಗಳನ್ನು ಖಾಸಗಿ ವಲಯದ ಉದ್ದಿಮೆ ಎಂದು ಕರೆಯಲಾಗಿದೆ.<br><br>**2)ಖಾಸಗಿ ವಲಯದ ಉದ್ದಿಮೆಗಳ ಕಾರ್ಮಿಕರು:** ಮೇಲ್ಕಂಡ ಯೋಜನೆಯನ್ನು ಆಯ್ಕೆ ಮಾಡಿಕೊಳ್ಳುವ ಉದ್ದಿಮೆದಾರರ ಸಂಸ್ಥೆಯಲ್ಲಿ ಮೀಸಲಾತಿ ನಿಯಮಕ್ಕೊಳಪಟ್ಟು ಪ್ರಪ್ರಥಮವಾಗಿ ನೇಮಕಗೊಳ್ಳುವ ಎಲ್ಲಾ ಕುಶಲ/ಅರೆಕುಶಲ/ಕುಶಲರಲ್ಲದ ಮತ್ತು ಲಿಪಿಕ ಕಾರ್ಮಿಕರು (ಕಾರ್ಮಿಕರ ರಾಜ್ಯ ವಿಮಾ ನಿಗಮ ಮತ್ತು ಕಾರ್ಮಿಕರ ಭವಿಷ್ಯ ನಿಧಿ ಸಂಘಟನೆ ಕಾಲಕಾಲಕ್ಕೆ ನಿಗಧಿಪಡಿಸುವ ವೇತನ ಮಿತಿಗೆ ಒಳಪಟ್ಟು).<br><br>**3)ಪ್ರಪ್ರಥಮ ನೇಮಕಾತಿ:** ಮೀಸಲಾತಿ ನಿಯಮಕ್ಕೆ ಒಳಪಟ್ಟು ನೇಮಕಗೊಳ್ಳುವ ಕಾರ್ಮಿಕರು ಈ ಹಿಂದೆ ಯಾವುದೇ ಉದ್ದಿಮೆಯ ಕೆಲಸದಲ್ಲಿ ಈ ಸೌಲಭ್ಯದಡಿ ನೇಮಕ ಹೊಂದಿರಬಾರದು/ಅಥವಾ ಪ್ರಪ್ರಥಮವಾಗಿ ಕಾರ್ಮಿಕರ ರಾಜ್ಯ ವಿಮಾ ಕಾಯ್ದೆ, 1948, ಕಾರ್ಮಿಕರ ಭವಿಷ್ಯ ನಿದಿ ಮತ್ತು ಇತರೆ ಪ್ರಾವಧಾನಗಳ ಕಾಯ್ದೆ, 1952 ರಡಿ ಸವಲತ್ತುಗಳನ್ನು ಪಡೆಯದಿರತಕ್ಕಂತಹ ನೌಕರರು ನೇಮಕಗೊಂಡಲ್ಲಿ ಅಂಥಹ ನೌಕರರ ನೇಮಕಾತಿ ಪ್ರಪ್ರಥಮ ನೇಮಕಾತಿ ಎಂದು ಪರಿಗಣಿಸಲಾಗುವುದು.<br><br>**4)ಯೋಜನೆ ಅನುಷ್ಠಾನಗೊಳಿಸುವ ಪ್ರಾಧಿಕಾರ:** ಆಶಾದೀಪ ಯೋಜನೆಯಡಿ ಮೀಸಲಾತಿ ನಿಯಮದನ್ವಯ ನೇಮಕ ಮಾಡಿಕೊಂಡ ಕಾರ್ಮಿಕರಿಗೆ ಸಂಬಂಧಿಸಿದಂತೆ ಆಡಳಿತವರ್ಗದ ವಂತಿಕೆಗಳಾದ ಕಾರ್ಮಿಕ ರಾಜ್ಯ ವಿಮಾ ವಂತಿಕೆ ಮತ್ತು ಭವಿಷ್ಯ ನಿಧಿ ವಂತಿಕೆಗಳನ್ನು ಖಾಸಗಿ ಉದ್ದಿಮೆದಾರರಿಗೆ ಮರುಪಾವತಿಸುವ ಸಲುವಾಗಿ ಕಾರ್ಮಿಕ ಆಯುಕ್ತರನ್ನು ಸಕ್ಷಮ ಪ್ರಾಧಿಕಾರ ಎಂದು ನಿಯೋಜಿಸಿದೆ.<br><br>**5)ಪರಿಶಿಷ್ಟ ಜಾತಿ:** ಭಾರತದ ಸಂವಿಧಾನದ ಅನುಚ್ಛೇಧ 341ರಡಿಯಲ್ಲಿ (ಪರಿಶಿಷ್ಟ ಜಾತಿ) ಆದೇಶ 1950ರಲ್ಲಿ ಮತ್ತು ಕಾಲಕಾಲಕ್ಕೆ ಮಾಡಲಾದ ತಿದ್ದುಪಡಿಗಳಲ್ಲಿ ಸೂಚಿಸಲಾದ ಜಾತಿಗಳನ್ನು 'ಪರಿಶಿಷ್ಟ ಜಾತಿಗಳೆಂದು' ಉಲ್ಲೇಖಿಸಿದ್ದು, ಇವುಗಳನ್ನು ನಿರ್ಧಿಷ್ಟವಾಗಿ **ಅನುಬಂಧ-1**ರಲ್ಲಿ ನಮೂದಿಸಲಾಗಿದೆ.<br><br>**6)ಪರಿಶಿಷ್ಟ ಪಂಗಡ:** ಭಾರತದ ಸಂವಿಧಾನದ ಅನುಚ್ಛೇಧ 342ರಡಿಯಲ್ಲಿ (ಪರಿಶಿಷ್ಟ ಪಂಗಡಗಳು) ಆದೇಶ 1950ರಲ್ಲಿ ಮತ್ತು ಕಾಲಕಾಲಕ್ಕೆ ಮಾಡಲಾದ ತಿದ್ದುಪಡಿಗಳಲ್ಲಿ ಸೂಚಿಸಲಾದ |

| | | |
|---|---|---|
| | | ಜಾತಿಗಳನ್ನು 'ಪರಿಶಿಷ್ಟ ಪಂಗಡಗಳೆಂದು' ಉಲ್ಲೇಖಿಸಿದ್ದು, ಇವುಗಳನ್ನು ನಿರ್ದಿಷ್ಟವಾಗಿ **ಅನುಬಂಧ-2**ರಲ್ಲಿ ನಮೂದಿಸಲಾಗಿದೆ.<br><br>**7)ಮೀಸಲಾತಿ:** ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ-8ಸೇನಿಮ 95, ದಿನಾಂಕ: 20-06-1995ರ ಆದೇಶದಲ್ಲಿರುವಂತೆ ಪರಿಶಿಷ್ಟ ಜಾತಿಯವರಿಗಾಗಿ ಒಟ್ಟು ನೇಮಕಾತಿಯಲ್ಲಿ ಶೇಕಡ 15 ರಷ್ಟು ಹಾಗೂ ಪರಿಶಿಷ್ಟ ಪಂಗಡದವರಿಗಾಗಿ ಒಟ್ಟು ನೇಮಕಾತಿಯಲ್ಲಿ ಶೇಕಡ 3 ರಷ್ಟು.<br><br>**8)ಪ್ರಮಾಣ ಪತ್ರ:** ಮೀಸಲಾತಿ ಕೋರಿ ಖಾಸಗಿ ಉದ್ದಿಮೆಗಳಲ್ಲಿ ನೇಮಕಾತಿ ಹೊಂದಲು ಇಚ್ಛಿಸುವ ಅಭ್ಯರ್ಥಿಗಳು ನಮೂನೆ-ಡಿ (ನಿಯಮ-3ಎ(2)(3)) ರಲ್ಲಿ ತಮ್ಮ ಜಾತಿಯ ಬಗ್ಗೆ ಪ್ರಮಾಣ ಪತ್ರವನ್ನು (ಅನುಬಂಧ-3 ರಲ್ಲಿರುವಂತೆ) ತಮ್ಮ ಸ್ವಂತ ತಾಲ್ಲೂಕಿನ ತಹಶೀಲ್ದಾರ್‌ರವರಿಂದ ಪಡೆದು ಉದ್ದಿಮೆದಾರರಿಗೆ ಸಲ್ಲಿಸಬೇಕು.<br><br>**9)ಸಿಂಧುತ್ವ ಪ್ರಮಾಣ:** ನಮೂನೆ-ಡಿ ರಲ್ಲಿ ಮೀಸಲಾತಿ ಕೋರಿ ಖಾಸಗಿ ಉದ್ದಿಮೆಗಳಲ್ಲಿ ನೇಮಕಾತಿ ಹೊಂದಲು ಇಚ್ಛಿಸುವ ಅಭ್ಯರ್ಥಿಗಳು ಸಲ್ಲಿಸಿದ್ದ ಜಾತಿ ಪ್ರಮಾಣ ಪತ್ರವನ್ನು ಉದ್ದಿಮೆದಾರರು ಸಂಬಂಧಿಸಿದ ಜಿಲ್ಲಾ ಪ್ರಾಧಿಕಾರದ ವತಿಯಿಂದ ಪರಿಶೀಲನೆ ಮಾಡಿ ಸಿಂಧುತ್ವವನ್ನು ಪಡೆದು ನಿಗಧಿತ ನಮೂನೆಯಲ್ಲಿ ಪಡೆದುಕೊಳ್ಳುವುದು.<br><br>**10)ಮೀಸಲಾತಿ ನಿಯಮದನ್ವಯ ನೇಮಕಾತಿ ಹೊಂದಿದ ಕಾರ್ಮಿಕರ ರಾಜ್ಯ ವಿಮಾ ನಿಗಮ ನೋಂದಣಿ ಪ್ರಮಾಣ ಪತ್ರ:** ಪ್ರಪ್ರಥಮವಾಗಿ ಮೀಸಲಾತಿ ನಿಯಮದನ್ವಯ ನೇಮಕಾತಿ ಹೊಂದಿದ ಕಾರ್ಮಿಕರ ನೋಂದಣಿಯನ್ನು ಕಾರ್ಮಿಕರ ರಾಜ್ಯ ವಿಮಾ ನಿಗಮ ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸಿ ನೋಂದಣಿ ಮಾಡಿಸಿದ ಬಗ್ಗೆ ಕಾರ್ಮಿಕರ ಐ.ಪಿ. ಸಂಖ್ಯೆ.<br><br>**11)ಮೀಸಲಾತಿ ನಿಯಮದನ್ವಯ ನೇಮಕಾತಿ ಹೊಂದಿದ ಕಾರ್ಮಿಕರ ಭವಿಷ್ಯ ನಿಧಿ ನೋಂದಣಿ ಪ್ರಮಾಣ ಪತ್ರ:** ಪ್ರಪ್ರಥಮವಾಗಿ ಮೀಸಲಾತಿ ನಿಯಮದನ್ವಯ ನೇಮಕಾತಿ ಹೊಂದಿದ ಕಾರ್ಮಿಕರ ನೋಂದಣಿಯನ್ನು ಭವಿಷ್ಯನಿಧಿ ಸಂಘಟನೆಯಲ್ಲಿ ನಮೂನೆ-2 ರಲ್ಲಿ ಅರ್ಜಿ ಸಲ್ಲಿಸಿ ನೋಂದಣಿ ಮಾಡಿಸಿದ ಬಗ್ಗೆ ಕಾರ್ಮಿಕರ ಮತ್ತು ಉದ್ದಿಮೆಯ ನೋಂದಣಿ ಸಂಖ್ಯೆ./ಯು.ಎ.ಎನ್ (ಯೂನಿವರ್ಸಲ್ ಅಕೌಂಟ್ ಸಂಖ್ಯೆ).<br><br>12)ಈ ಯೋಜನೆ ಜಾರಿಗೆ ಬಂದ ನಂತರ ಮೀಸಲಾತಿ ನಿಯಮದನ್ವಯ ನೇಮಕ ಮಾಡಿಕೊಳ್ಳಲು ಉದ್ದೇಶಿಸಿರುವ ಖಾಸಗಿ ವಲಯದ ಉದ್ದಿಮೆದಾರರು ಮೀಸಲಾತಿ ನಿಯಮದಂತೆ ನೇಮಕ ಮಾಡಿಕೊಳ್ಳಲು ಈ ಕೆಳಕಂಡ ಕ್ರಮವನ್ನು ಅನುಸರಿಸತಕ್ಕದ್ದು.<br><br>ಅ) ನೇಮಕಾತಿ ಮಾಡಿಕೊಳ್ಳುವ ಸಂದರ್ಭದಲ್ಲಿ ಮೀಸಲಾತಿ ಅನುಸರಿಸುವ ಬಗ್ಗೆ ಸ್ಥಳೀಯ ಮತ್ತು ಪ್ರಮುಖ ದಿನಪತ್ರಿಕೆಗಳಲ್ಲಿ ಅಥವಾ ಆನ್‌ಲೈನ್ (ವೆಬ್ ಪೋರ್ಟಲ್) ಮೂಲಕ ಪ್ರಕಟಣೆ ನೀಡುವುದು.<br>ಆ) ಅರ್ಜಿಯೊಂದಿಗೆ ಜಾತಿ ಪ್ರಮಾಣ ಪತ್ರವನ್ನು |

ಪಡೆದುಕೊಳ್ಳುವುದು. ಮೀಸಲಾತಿ ನಿಯಮದಂತೆ ಪರಿಶೀಲಿಸಿ ನೇಮಕಾತಿ ಕ್ರಮಕೈಗೊಳ್ಳುವುದು. ಹಾಗೂ ಪಡೆದುಕೊಂಡ ಜಾತಿ ಪ್ರಮಾಣ ಪತ್ರದ ಸಿಂಧುತ್ವ ಪ್ರಮಾಣ ಪತ್ರವನ್ನು ಪಡೆದುಕೊಳ್ಳುವುದು.

ಇ) ನೇಮಕಾತಿ ಮಾಡಿಕೊಳ್ಳಲು ಉದ್ದೇಶಿಸಿದ ಬಗ್ಗೆ ನೀಡಿದ ಪತ್ರಿಕಾ ಪ್ರಕಟಣೆಯ ಪ್ರತಿ ಅಥವಾ ಆನ್‌ಲೈನ್ (ವೆಬ್‌ಪೋರ್ಟಲ್) ದಾಖಲೆಗಳು, ನೇಮಕ ಮಾಡಿಕೊಂಡ ಒಟ್ಟು ನೌಕರರ ಸಂಖ್ಯೆ, ಅದರಲ್ಲಿ ಮೀಸಲಾತಿ ಅನ್ವಯ ನೇಮಕಾತಿಗೊಂಡ ಅಭ್ಯರ್ಥಿಗಳ ಸಂಖ್ಯೆ ಮತ್ತು ಅವರ ಹೆಸರು ವಿಳಾಸ ಮತ್ತು ನೇಮಕಾತಿ ಪತ್ರ ಇವುಗಳನ್ನು ನಿರ್ವಹಿಸುವುದು..

**13)ಸರ್ಕಾರದ ಯೋಜನೆಯಡಿ ಉದ್ದಿಮೆದಾರರು ತಮ್ಮ ಮೀಸಲಾತಿ ನಿಯಮದಲ್ಲಿ ನೇಮಕಗೊಂಡ ಕಾರ್ಮಿಕರ ಭವಿಷ್ಯ ನಿಧಿ ಮತ್ತು ಕಾರ್ಮಿಕರ ರಾಜ್ಯ ವಿಮಾ ವಂತಿಕೆಯನ್ನು ಕ್ಲೈಮ್ ಮಾಡಲು ಅನುಸರಿಸಬೇಕಾಧ ವಿಧಾನಗಳು:** ಈ ಯೋಜನೆ ಜಾರಿಗೆ ಬಂದನಂತರ ಖಾಸಗಿ ವಲಯದ ಉದ್ದಿಮೆದಾರರು ತಾವು ಕೆಲಸಕ್ಕೆ ನೇಮಕ ಮಾಡಿಕೊಳ್ಳುವ ಸಂಧರ್ಭದಲ್ಲಿ ಮೀಸಲಾತಿ ನೀಡಿ ನೇಮಿಸಿಕೊಂಡ ಪರಿಶಿಷ್ಟ ಜಾತಿ ಮತ್ತು ಪಂಗಡದ ವರ್ಗಕ್ಕೆ ಸೇರಿದ ಕಾರ್ಮಿಕರಿಗೆ ಸಂಬಂಧಿಸಿದಂತೆ ಕಾರ್ಮಿಕರ ರಾಜ್ಯ ವಿಮಾ ನಿಗಮಕ್ಕೆ ಪಾವತಿಸಬೇಕಾದ ಮಾಲೀಕರ ವಂತಿಕೆ 4.75 ಅನ್ನು ಹಾಗೂ ಕಾರ್ಮಿಕರ ಭವಿಷ್ಯ ನಿಧಿ ಸಂಘಟನೆಗೆ ಪಾವತಿಸಬೇಕಾದ ಮಾಲೀಕವರ್ಗದ ವಂತಿಕೆ ಶೇಕಡ 12 ಮತ್ತು ಸಂಬಂಧಿಸಿದವರಿಗೆ ಪಾವತಿಸಿದ ಮಾಸಿಕ ವಂತಿಕೆ ಬಗ್ಗೆ ವೇತನ ಪಾವತಿಯಾದ ದಿನಾಂಕದ ನಂತರ ಕಾರ್ಮಿಕರ ರಾಜ್ಯ ವಿಮಾ ನಿಗಮ ಮತ್ತು ಕಾರ್ಮಿಕರ ಭವಿಷ್ಯ ನಿಧಿ ಸಂಘಟನೆ ನಿಗಧಿಪಡಿಸಿದ ಕೊನೆಯ ದಿನಾಂಕದ ನಂತರದ 15 ದಿವಸಗಳೊಳಗೆ ಪ್ರಪ್ರಥಮ ಮಾಹೆಯಲ್ಲಿ ಪ್ಯಾರ ಸಂಖ್ಯೆ: 12ರ ಅ, ಆ ಮತ್ತು ಇ ರಲ್ಲಿ ಸೂಚಿಸಿರುವ ದಾಖಲಾತಿಗಳೊಂದಿಗೆ ತಮ್ಮ ಸಂಸ್ಥೆಯ ನೋಂದಣಿ ಪ್ರಮಾಣ ಪತ್ರ/ಪರವಾನಗಿ ಪ್ರಮಾಣ ಪತ್ರದ ಧೃಢೀಕೃತ ಪ್ರತಿಯೊಂದಿಗೆ ಕಾರ್ಮಿಕರ ರಾಜ್ಯ ವಿಮಾ ನಿಗಮಕ್ಕೆ ಮಾಸಿಕ ಚಂದಾ ಕಟ್ಟಿರುವ ಚಲನ್ ಹಾಗೂ 'ಆಶಾದೀಪ' ಯೋಜನೆಯಡಿ ನೇಮಕಗೊಂಡ ಕಾರ್ಮಿಕರಿಗೆ ಸಂಬಂಧಿಸಿದಂತೆ **(ಪ್ರಮುಖವಾಗಿ ಗುರುತಿಸಿ)** ಆನ್‌ಲೈನ್ ಮುಖಾಂತರ ಪಡೆದ ಮಾಸಿಕ ಚಂದಾದಾರರ ಮಾಹಿತಿ, ಕಾರ್ಮಿಕರ ಭವಿಷ್ಯ ನಿಧಿ ಸಂಘಟನೆಗೆ ವಂತಿಕೆ ಪಾವತಿಸಿರುವ ಬಗ್ಗೆ ಎಲೆಕ್ಟ್ರಾನಿಕ್ ಚಲನ್ ಹಾಗೂ **ಅನುಬಂಧ-4**ರಲ್ಲಿ ಯೋಜನೆಯಡಿ ಕಾರ್ಮಿಕರ ಮಾಹಿತಿ ಮತ್ತು ನೇಮಕಾತಿ ಹೊಂದಿದ ಕಾರ್ಮಿಕರ ಧೃಢಿಕೃತ ಪಟ್ಟಿ ಹಾಗೂ ಇಲಾಖೆ ನಿಗಧಿಪಡಿಸಿರುವ ನಮೂನೆಯೊಂದಿಗೆ **(ನಮೂನೆ-ಎ, ಅನುಬಂಧ-5 ರಲ್ಲಿರುವಂತೆ)** ಪ್ರಸ್ತಾವನೆಯನ್ನು ಸಂಬಂಧಿಸಿದ ಪ್ರಾಧಿಕಾರಕ್ಕೆ ಸಲ್ಲಿಸುವುದು. ತದನಂತರದ ಮಾಹೆಗಳಲ್ಲಿ ಹೊಸದಾಗಿ ಮತ್ತೆ ನೇಮಕ ಮಾಡದೇ ಇದ್ದಲ್ಲಿ ಯಥಾಸ್ಥಿತಿಯನ್ನು ಕಾಯ್ದುಕೊಳ್ಳುವುದು, ಇಲ್ಲವಾದಲ್ಲಿ ಅರ್ಜಿಯನ್ನು ಕಾರ್ಮಿಕರ ರಾಜ್ಯ ವಿಮಾ ನಿಗಮ ಮತ್ತು ಕಾರ್ಮಿಕರ ಭವಿಷ್ಯ ನಿಧಿ ಸಂಘಟನೆಗೆ ಪಾವತಿಸಿದ ಚಲನ್‌ಗಳ ಧೃಢೀಕೃತ ಪ್ರತಿಯೊಂದಿಗೆ ಹಾಗೂ ಸಂಬಂಧಿಸಿದ ಕಾರ್ಮಿಕರ ಪಟ್ಟಿಯನ್ನು ಹಾಗೂ ನಿಗಧಿ ಪಡಿಸಿದ ನಮೂನೆಗಳನ್ನು ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸುವುದು.

| | | |
|---|---|---|
| | | 14)ಖಾಸಗಿ ಉದ್ದಿಮೆದಾರರು ಸಲ್ಲಿಸಿರುವ ಪ್ರಸ್ತಾವನೆಯನ್ನು ಅಂದರೆ, ಖಾಸಗಿ ಉದ್ದಿಮೆಯ ಉದ್ದಿಮೆದಾರರು ಮೀಸಲಾತಿ ನಿಯಮದನ್ವಯ ನೇಮಕಗೊಂಡ ಕಾರ್ಮಿಕರಿಗೆ ಸಂಬಂಧಿಸಿದಂತೆ ಕಾರ್ಮಿಕರ ರಾಜ್ಯ ವಿಮಾ ನಿಗಮಕ್ಕೆ ಪಾವತಿಸಿರುವ ಮಾಲೀಕರ ವಂತಿಕೆ ಶೇಕಡ 4.75 ರಷ್ಟು ಹಾಗೂ ಕಾರ್ಮಿಕರ ಭವಿಷ್ಯ ನಿಧಿ ವಂತಿಕೆ ಶೇಕಡ 12 ರಷ್ಟು ಅನ್ನು ಪಾವತಿಸಿರುವ ದಾಖಲೆಯನ್ನು ಕಾರ್ಮಿಕ ಆಯುಕ್ತರು ಪ್ರಸ್ತಾವನೆಯೊಂದಿಗೆ ದಾಖಲೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಖಾತ್ರಿಪಡಿಸಿಕೊಂಡು ಮರುಪಾವತಿ ಮಾಡಲು ಸೂಕ್ತ ಕ್ರಮಕೈಗೊಳ್ಳುವುದು. |

ಆಯುಕ್ತರು
ಕಾರ್ಮಿಕ ಇಲಾಖೆ

## ಅನುಬಂಧ–01

## ಪರಿಶಿಷ್ಟ ಜಾತಿ ಭಾಗ–VII ಕರ್ನಾಟಕ

| ಕ್ರಮ ಸಂಖ್ಯೆ | ಜಾತಿಯ ಹೆಸರು |
|---|---|
| 1 | ಆದಿ ಆಂಧ್ರ |
| 2 | ಆದಿ ದ್ರಾವಿಡ |
| 3 | ಆದಿ ಕರ್ನಾಟಕ |
| 4 | ಆಧಿಯ್ಯ (ಕೊಡಗು ಜಿಲೆಯಲ್ಲಿ) |
| 5 | ಆಗೇರ್ |
| 6 | ಅಜಿಲ |
| 7 | ಅನಾಮುಕ್ |
| 8 | ಅರೇ ಮಾಲ |
| 9 | ಅರುಂಧತಿಯರ್ |
| 10 | ಅರ್‌ವ ಮಾಲ |
| 11 | ಬೈರ |
| 12 | ಬಕಡ್ |
| 13 | ಬಂತ್ (ಬೆಳಗಾಂ, ಬಿಜಾಪುರ ದಾರವಾಡ ಮತ್ತು ಉತ್ತರ ಕನ್ನಡ ಜಿಲ್ಲೆಯಲ್ಲಿ) |
| 14 | ಬಕುಡ |
| 15 | ಬಲಗಲ್ |
| 16 | ಬಂಡಿ |
| 17 | ಬಂಜಾರ, ಲಂಬಾಣಿ |
| 18 | ಬತಾಡ |
| 19 | ಬೇಡ ಜಂಗಮ್ . ಬುಡ್ಗ ಜಂಗಮ್ |
| 20 | ಬೆಲ್ಲಾರ |
| 21 | ಬಂಗಿ , ಮೆಹ್ತಾರ್, ಓಲ್ಗಾನ , ರುಖಿ , ಮಲ್ಕಾನ , ಅಲಾಲ್‌ಕೋರ್, ಲಾಲ್‌ಬೇಗಿ. ಬಾಲ್ಮೀಕಿ. ಕೋರಾರ್. ಜಾಡಮಾಲಿ |
| 22 | ಬಂಬೀ , ಬಾಂಬೀ , ಅಸಾದರು, ಅಸೋಡಿ, ಚಮಾಡಿಯ, ಚಾಮರ್, ಚಂಬಾರ್, ಚಮ್‌ಗಾರ್. ಹರೇಲಯ್ಯ , ಹರಾಲಿ, ಖಾಲ್ಪ , ಮಚಿಗಾರ್, ಮೋಚಿಗಾರ್, ಮಾದಾರ್ ಮಾದಿಗ , ಮೋಚಿ, ಮುಚ್ಚಿ<br>ತೆಲಗು ಮೋಚಿ. ಕಾಮಟಿ. ರಾಣಿಗಾರ್ , ರೋಹಿದಾಸ್. ರೋಹಿತ್, ಸಮಗಾರ್, |
| 23 | ಭೋವಿ |
| 24 | ಬಿಂಡ್ಲ |
| 25 | ಬ್ಯಾಗಾರ |
| 26 | ಚಕ್ಕಿಲಿಯನ್ |
| 27 | ಚಲವಾದಿ , ಚಲ್ವಾದಿ, ಚನ್ನಯ್ಯ |
| 28 | ಚಂಡಾಲ |
| 29 | ಚೆನ್ನದಾಸರ್ , ಹೊಲಯದಾಸರ್ |
| 30 | ದಕ್ಕಲ , ದೊಕ್ಕಲವಾರ್ |
| 31 | ದಕ್ಕಲಿಗ |
| 32 | ಢೋರ್. ಕಕ್ಕಯ್ಯ. ಕಂಕಯ್ಯ |

| | |
|---|---|
| 33 | ಡೊಮ್ ಡೊಂಬಾರ ಪೈಡಿ , ಪನೊ |
| 34 | ಎಲ್ಲಮಲ್ವಾರ್ , ಎಲ್ಲಮ್ಮಲವಾಂಡ್ಲು |
| 35 | ಗಂಟಿ ಚೋರ್ಸ್ |
| 36 | ಗರೋಡ, ಗರೋ |
| 37 | ಗೊಡ್ಡ |
| 38 | ಗೋಸಂಗಿ |
| 39 | ಹಾಲರ್ |
| 40 | ಹಳ್ಸರ್ , ಹಸ್ಲರ್ , ಹುಲಸ್ವಾರ್ , ಹಲಸ್ವಾರ್ , |
| 41 | ಹಂದಿ ಜೋಗೀಸ್ |
| 42 | ಹಸ್ಲ |
| 43 | ಹೊಲ್ಲಾರ್ , ವಲ್ಹಾರ್ |
| 44 | ಹೊಲಯ, ಹೊಲರ್, ಹೊಲೆಯ |
| 45 | ಹೊಲೆಯ ದಾಸರಿ |
| 46 | ಜಗ್ಗಲಿ |
| 47 | ಜಾಂಬುವುಲು |
| 48 | ಕಡೈಯನ್ |
| 49 | ಕಲ್ಲಡಿ |
| 50 | ಕೆಂಪ್ಮಾರಿಸ್ |
| 51 | ಕೊಲುಪುಲವಾಂಡ್ಲು |
| 52 | ಕೂಸ |
| 53 | ಕೊರಚ |
| 54 | ಕೊರಮ |
| 55 | ಕೋಟೆಗಾರ್, ಮೇತ್ರಿ |
| 56 | ಕುಡುಂಬನ್ |
| 57 | ಕುರವನ್ |
| 58 | ಲಿಂಗಧರ್ |
| 59 | ಮಚಲ |
| 60 | ಮಾದರಿ |
| 61 | ಮದಿಗ |
| 62 | ಮಹಾರ್, ತರಾಲ್ , ದೇಗು ಮೇಗು |
| 63 | ಮಹ್ಯಾವಂಶಿ, ದೇಡ್, ವಂಕೇರ್, ಮುರು ವಂಕರ್ |
| 64 | ಮೈಲ |
| 65 | ಮಲ |
| 66 | ಮಲದಸರಿ |
| 67 | ಮಲಹನ್ನೈ |
| 68 | ಮಲ ಜಂಗಮ್ |
| 69 | ಮಲ ಮಸ್ತಿ |
| 70 | ಮಲ ಸಲೇ ನೆಟ್ಕನಿ |
| 71 | ಮಲ ಸನ್ಯಾಸಿ |
| 72 | ಮಂಗ್ ಮಟಂಗ್ , ಮಿನಿಮಾಧಿಗ್ |
| 73 | ಮಾಂಗ್ ಗಾರುಡಿ ಮಾಂಗ್ ಗಾರೋಡಿ |
| 74 | ಮನ್ನೆ |

| | |
|---|---|
| 75 | ಮಷ್ಟಿ |
| 76 | ಮಾವಿಲ್ಲನ್ |
| 77 | ಮೇಘವಲ್ ಮೇಘಾವರ್ |
| 78 | ಮೊಗೇರ್ |
| 79 | ಮುಕ್ರಿ |
| 80 | ಮುದಲಾ |
| 81 | ನೈದಿಯ ಹದಿ |
| 82 | ನಲ್ಕಾದಾಯ |
| 83 | ನಲ್ಕೇಯವ |
| 84 | ನಾಯಡ್ |
| 85 | ಪಾಳೆ |
| 86 | ಪಲನ್ |
| 87 | ಪಂಬಾಡ |
| 88 | ಪಂಚಮ |
| 89 | ಪನ್ನಿಯಾದಿ |
| 90 | ಪರಿಯನ್ , ಪರಾಯ |
| 91 | ಪರವನ್ |
| 92 | ರಾನ್ನೇಯರ್ |
| 93 | ಸಮಗರ |
| 94 | ಸಂಬನ್ |
| 95 | ಸಫಾರಿ |
| 96 | ಸಿಲೇಕ್ಯಾತಾಸ್ |
| 97 | ಸಿದ್ದೋಲು, ಚಿಂದೋಲು |
| 98 | ಸುದುಗದು ಸಿದ್ದ |
| 99 | ತೋಟಿ |
| 100 | ತಿಗಾರ್ , ತಿರುಬೋಂಡ |
| 101 | ವಲ್ಲುವನ್ |

## ಅನುಬಂಧ– 2.

## ಪರಿಶಿಷ್ಟ ವರ್ಗ– ಭಾಗ– 4– ಕರ್ನಾಟಕ

| ಕ್ರಮ ಸಂಖ್ಯೆ | ಜಾತಿಯ ಹೆಸರು |
|---|---|
| 1. | ಅದಿಯನ್ |
| 2. | ಬಾರ್ಡ |
| 3. | ಬವಚ, ಬಮಚಾ |
| 4. | ಬಿಲ್, ಬಿಲ್ ಗಾರಿಸೀಯಾ, ದೋಲಿ ಬಿಲ್, ದುಂಗರಿ ಗಾರಸೀಯಾ, ಮೇವಾಸಿ ಬಿಲ್, ರಾವಲ್ ಬಿಲ್, ತಡವಿ ಬಿಲ್, ಭಾಗಾಲಿಯಾ, ಬಿಲಾಲ್, ಪೌರ, ವಸವ, ವಸವೆ. |
| 5. | ಚೆಂಚೂ, ಚೆಂಚ್‌ವಾರ್ |
| 6. | ಚೋಧಾರ |
| 7. | ದುಬ್ಲ, ತಲ್ವಿಯಾ, ಹಳಪತಿ |
| 8. | ಗಮಿತ್, ಗಮತಾ, ಗಾವಿತ್, ಮಾವ್ಚಿ, ಪದ್ವಿ, ವಾಲ್ವಿ |
| 9. | ಗೊಂಡಾ, ನಾಯ್ಕ್‌ಪೋಡ್, ರಾಜಗೊಂಡ |
| 10. | ಗೌಡಾಲು |
| 11. | ಹಕ್ಕಿಪಿಕ್ಕಿ |
| 12. | ಹಸಲರು |
| 13. | ಇರುಲಿರ್ |
| 14. | ಇರುಳಿಗ |
| 15. | ಜೇನುಕುರುಬ |
| 16. | ಕಾಡು ಕುರುಬ |
| 17. | ಕಮ್ಮಾರ ( ದಕ್ಷಿಣ ಕನ್ನಡ ಜಿಲ್ಲೆ ಮತ್ತು ಮೈಸೂರು ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕು) |
| 18. | ಕನಿಯನ್, ಕನ್ಯಾಯನ್, (ಮೈಸೂರು ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕು) |
| 19. | ಕಾಥೋಡಿ, ಕಟಕರಿ, ದೋರ್ ಕತಕ್ಕಡಿ, ದೋರ್ ಕತಕಾರಿ, ಸನ್ ಕಾತೋಡಿ, ಸನ್ ಕತಕಾರಿ. |
| 20. | ಕಟ್ಟುನಾಯಕನ್ |
| 21. | ಕೊಕ್ನ, ಕೊಕ್ನಿ, ಕುಕ್ನ |
| 22. | ಕೋಲಿ ದೋರ್, ತೊಗರಿ ಕೋಲಿ, ಕೊಲ್ಚಾ, ಕೊಲ್ಘಾ. |
| 23. | ಕೊಂಡ ಕಾಪಸ್ |
| 24. | ಕೊರಗ |
| 25. | ಕೋಟ |
| 26. | ಕೋಯ, ಬಿನ ಕೋಯ, ರಾಜ್ ಕೋಯ |

| | |
|---|---|
| 27. | ಕುಡಿಯಾ, ಮೇಳಕುಡಿ |
| 28. | ಕುರುಬ (ಕೊಡಗು ಜಿಲ್ಲೆ) |
| 29. | ಕುರುಮಾನ್ಸ್ |
| 30. | ಮಹಾ ಮಲಾಸರ್ |
| 31. | ಮಲೈಕುಡಿ |
| 32. | ಮಲಸಾರ್ |
| 33. | ಮಲೈಕಂದಿ |
| 34. | ಮಲೇರು |
| 35. | ಮರಾಠ ( ಕೊಡಗು ಜಿಲ್ಲ) |
| 36. | ಮರಾಠಿ ( ದಕ್ಷಿಣ ಕನ್ನಡ ಜಿಲ್ಲೆ) |
| 37. | ಮೇದಾ, |
| 38. | ನಾಯ್ಕಡ, ನಾಯಕಾ, ಚೋಲಿವಾಲ,ನಾಯಕ್, ಕಾಪಡಿಯಾ ನಾಯಕಾ, ಮೋಟಾ ನಾಯಕ, ನಾನಾ ನಾಯಕ, ನಾಯ್ಕ್, ನಾಯಕ, ಬೇಡ, ಬೇಡರ್ ಮತ್ತು ವಾಲ್ಮೀಕಿ. |
| 39. | ಪಲ್ಲಿಯಾನ್ಸ್, |
| 40. | ಪನಿಯಾನ್, |
| 41. | ಪರಧಿ, ಅಡ್ವಿಚಿಂಚರ್, ಪಾನ್ಸ ಪರಧಿ, |
| 42. | ಪಟೇಲಿಯಾ. |
| 43. | ರಾಥ್ವಾ |
| 44. | ಶೋಲಿಗಾ |
| 45. | ಸೋಲಿಗರು |
| 46. | ತೋಡಾ |
| 47. | ವರ್ಲಿ |
| 48. | ವಿಟೋಲಿಯಾ, ಕೋತ್ವಾಲಿಯ, ಬರೋಂಡಿಯ |
| 49. | ಯರವಾ |
| 50. | ಸಿದ್ದಿ ( ಉತ್ತರ ಕನ್ನಡ ಜಿಲ್ಲೆ) |

ಆದೇಶದ ಸಂಖ್ಯೆಯನ್ನು ಸೇರಿಸಿದೆ. ಸಂಖ್ಯೆ: ಎಸ್‌ಡಬ್ಲ್ಯೂಡಿ177 ಎಸ್ ಎ ಡಿ99, ಬೆಂಗಳೂರು ದಿನಾಂಕ: 15.06.2013.

③

# ಅನುಬಂಧ-೦೫

## ಮರುಪಾವತಿ ಅರ್ಜಿ ನಮೂನೆ

## ನಮೂನೆ (ಎ)

ಖಾಸಗಿ ಸಂಸ್ಥೆಗಳ ಯೋಜನೆ(ಆಶಾ ದೀಪ ಯೋಜನೆ) ಸಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಉದ್ಯೋಗದ ಪ್ರೋತ್ಸಾಹಕ್ಕಾಗಿ ಕರ್ನಾಟಕ ಸರಕಾರದ ಯೋಜನೆಯಡಿ ಇಎಸ್‌ಐ/ಪಿಎಫ್ ಕೊಡುಗೆ ಮರುಪಾವತಿ ಪಡೆಯಲು ಉದ್ಯೋಗಿ ಸಲ್ಲಿಸಿದ ಅರ್ಜಿ.

ಯೋಜನೆ(ಆಶಾ ದೀಪ ಯೋಜನೆ)

ಗೆ,

ಮಾನ್ಯ ಕಾರ್ಮಿಕ ಆಯುಕ್ತರು
ಕಾರ್ಮಿಕ ಭವನ
ಬೆಂಗಳೂರು-560029.

| ಕ್ರಮ ಸಂ. | ಸಂಕ್ಷಿಪ್ತ ಮಾಹಿತಿ | ವಿವರ |
|---|---|---|
| 01 | ಮಾಲೀಕರ/ಸಂಸ್ಥೆಯ/ಕಾರ್ಖಾನೆಯ/ಇತ್ಯಾದಿ ಹೆಸರು ಮತ್ತು ವಿಳಾಸ/ಮೊ.ಸಂಖ್ಯೆ/ಇ-ಮೇಲ್ ಸಂಖ್ಯೆ | |
| 02 | ಮಾಲೀಕರ ಹೆಸರು, ಹುದ್ದೆ, ಮತ್ತು ವಾಸ ಸ್ಥಳದ ವಿಳಾಸ ದೂರವಾಣಿ ಸಂಖ್ಯೆ ಜೊತೆಗೆ ಮೊ.ಸಂಖ್ಯೆ/ ಇ-ಮೇಲ್ ಸಂಖ್ಯೆ | |
| 03 | ವ್ಯವಹಾರದ ಸ್ವರೂಪ | |
| 04 | ಕಾರ್ಖಾನೆ ಕಾಯಿದೆ 1948/ ಕರ್ನಾಟಕ ಅಂಗಡಿಗಳು ಮತ್ತು ವಾಣಿಜ್ಯ ಸಂಸ್ಥೆಗಳ ಕಾಯ್ದೆ 1961, ಪ್ಲಾಂಟೇಶನ್ ಕಾರ್ಮಿಕ ಕಾಯ್ದೆ, 1951, ಮೋಟಾರ್ ವಾಹನ ಕಾರ್ಮಿಕರ ಕಾಯ್ದೆ 1961/ಬೀಡಿ ಮತ್ತು ಸಿಗಾರ್ ಕಾರ್ಮಿಕರ ಕಾಯ್ದೆ, 1966 ರಡಿ ನೊಂದಣಿ ಸಂಖ್ಯೆ(ಯಾವ ಕಾಯ್ದೆ ಅನ್ವಯ ಅನುಸಾರ) | |
| 05 | ಇಎಸ್‌ಐ ಕೋಡ್ ಸಂಖ್ಯೆ(ಹಂಚಿಕೆಯಾದ ಸಂಖ್ಯೆಯ ದೃಢೀಕೃತ ಪ್ರತಿ ಲಗತ್ತಿಸುವುದು) | |
| 06 | ಪಿಎಫ್ ಕೋಡ್ ಸಂಖ್ಯೆ(ಹಂಚಿಕೆಯಾದ ಸಂಖ್ಯೆಯ ದೃಢೀಕೃತ ಪ್ರತಿ ಲಗತ್ತಿಸುವುದು) | |
| 07 | ಪ್ರಸ್ತುತ ಒಟ್ಟು ಕಾರ್ಮಿಕರ ಸಂಖ್ಯೆ ಗಂಡು/ಹೆಣ್ಣು, ಒಟ್ಟು | |
| 08 | ಸದರಿ ಮಾಹೆಯಲ್ಲಿ ಮೀಸಲಾತಿ ಯೋಜನೆಯಡಿ ನೇಮಕವಾದ ಒಟ್ಟು ಕಾರ್ಮಿಕರ ಸಂಖ್ಯೆ | |
| 09 | ಒಟ್ಟು ~~ನೇಮಕವಾದ ಕಾರ್ಮಿಕರಲ್ಲಿ~~ ಮೀಸಲಾತಿ ಯೋಜನೆಯಡಿ ನೇಮಕವಾದ ಪ.ಜಾತಿ/ಪ.ಪಂ | ಗಂಡು: ಪ.ಜಾತಿ/ಪ.ಪಂ<br>ಹೆಣ್ಣು: ಪ.ಜಾತಿ/ಪ.ಪಂ |

| | | |
|---|---|---|
| | ಕಾರ್ಮಿಕರ ಹೆಸರು, ವಿಳಾಸ, ವಯಸ್ಸು, ಹುದ್ದೆ ಉಪಜಾತಿಯೊಂದಿಗೆ | |
| 10 | ಲಗತ್ತಿಸಬೇಕಾದ ದಾಖಲೆಗಳ ವಿವರ | 1<br>2<br>3<br>4<br>5 |
| 11 | ಮೀಸಲಾತಿ ಯೋಜನೆಯಡಿ ಕಾರ್ಮಿಕರ ಪರವಾಗಿ ಭರಿಸಿದ ಇಎಸ್‌ಐ ವಂತಿಕೆಯ ಒಟ್ಟು ಮೊತ್ತ(ಆಡಳಿತ ವರ್ಗದ ಪರವಾಗಿ)(ಪ್ರತಿಯೊಬ್ಬ ಕಾರ್ಮಿಕರ ಚಲನ ಸಂಖ್ಯೆ,ಬಟವಾಡೆ ವಿವರ ಮತ್ತು ಇಸಿಆರ್ ಗಳ ದೃಢೀಕೃತ ಪ್ರತಿ ಲಗತ್ತಿಸುವುದು) | |
| 12 | ಮೀಸಲಾತಿ ಯೋಜನೆಯಡಿ ಕಾರ್ಮಿಕರ ಪರವಾಗಿ ಭರಿಸಿದ ಪಿಫ್ ವಂತಿಕೆಯ ಒಟ್ಟು ಮೊತ್ತ(ಆಡಳಿತ ವರ್ಗದ ಪರವಾಗಿ)(ಪ್ರತಿಯೊಬ್ಬ ಕಾರ್ಮಿಕರ ಚಲನ ಸಂಖ್ಯೆ,ಬಟವಾಡೆ ವಿವರ ಮತ್ತು ಯುಎನ್ ಗಳ ದೃಢಿಕೃತ ಪ್ರತಿ ಲಗತ್ತಿಸುವುದು) | |

## ಘೋಷಣೆ

ಮೇಲೆ ನೀಡಿದ ಮಾಹಿತಿಯು ನನ್ನ ತಿಳುವಳಿಕೆ ಹಾಗೂ ನಂಬಿಕೆಗೆ ಅನುಗುಣವಾಗಿ ಸರಿ ಹಾಗೂ ನಿಜವಾಗಿರುತ್ತದೆ. ಮಾಹಿತಿ ಸುಳ್ಳು ಎಂದು ಸಾಬೀತುಪಡಿಸಿದರೆ ನಾನು/ನಾವು ಅದರ ಕಾನೂನು ಪರಿಣಾಮಗಳಿಗೆ ಹೊಣೆಗಾರರಾಗಿರುತ್ತೇವೆ ಎಂದು ಪ್ರಮಾಣೀಕರಿಸುತ್ತೇವೆ.

ಉದ್ಯೋಗದಾತನ ಸಹಿ ...........
ಹೆಸರು ಮತ್ತು ಹುದ್ದೆ/ಮುದ್ರೆ

ದಿನಾಂಕ:
ಸ್ಥಳ :

ಕರ್ನಾಟಕ ಸರ್ಕಾರ

ಕಂಇ 53 ಟಿಎನ್‌ಆರ್ 2018

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ: 8/2/.2018

ಇಂದ:
ಸರ್ಕಾರದ ಕಾರ್ಯದರ್ಶಿಗಳು
ಕಂದಾಯ ಇಲಾಖೆ
ಬಹುಮಹಡಿಗಳ ಕಟ್ಟಡ
ಬೆಂಗಳೂರು.

ಇವರಿಗೆ:
ಕಾರ್ಯದರ್ಶಿಗಳು
ಕರ್ನಾಟಕ ವಿಧಾನ ಸಭೆ/~~ಪರಿಷತ್ತು~~
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ~~ಶ್ರೀ~~/ಶ್ರೀಮತಿ, ಲಕ್ಷ್ಮೀ ಆರ್. ಹೆಬ್ಬಾಳ್ಕರ್, (ಬೆಳಗಾವಿ ಗ್ರಾಮಾಂತರ)
ವಿಧಾನ ಸಭೆ/ ~~ಪರಿಷತ್~~ ಸದಸ್ಯರು, ಇವರ ಚುಕ್ಕೆ ~~ಗುರುತಿನ~~/ಗುರುತಿಲ್ಲದ
ಪ್ರಶ್ನೆ ಸಂ: 372ಕ್ಕೆ ಉತ್ತರ ನೀಡುವ ಬಗ್ಗೆ.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ವಿಧಾನ ಸಭೆ/~~ಪರಿಷತ್~~ ಸದಸ್ಯರಾದ ಶ್ರೀ/~~ಶ್ರೀಮತಿ~~ ಲಕ್ಷ್ಮೀ R. ಹೆಬ್ಬಾಳ್ಕರ್ ಇವರ ಚುಕ್ಕೆ ~~ಗುರುತಿನ~~/ಗುರುತಿಲ್ಲದ ಪ್ರಶ್ನೆ ಸಂ: 372 ಕ್ಕೆ ಉತ್ತರಗಳ ಪ್ರತಿಗಳನ್ನು ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಶ್ರೀಪತಿ ಪಿ.ಕೆ.)
ಶಾಖಾಧಿಕಾರಿ
ಕಂದಾಯ ಇಲಾಖೆ,(ವಿಪತ್ತು ನಿರ್ವಹಣೆ)

ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 372

ಸದಸ್ಯರ ಹೆಸರು : ಶ್ರೀಮತಿ ಲಕ್ಷ್ಮೀ ಆರ್. ಹೆಬ್ಬಾಳ್ಕರ್ (ಬೆಳಗಾವಿ ಗ್ರಾಮಾಂತರ)

ಉತ್ತರಿಸುವವರು : ಕಂದಾಯ ಸಚಿವರು

ಉತ್ತರಿಸಬೇಕಾದ ದಿನಾಂಕ : 11.02.2019

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>1</td><td>ರಾಜ್ಯದಲ್ಲಿ ಉಂಟಾಗಿರುವ ಭೀಕರ ಬರಗಾಲದಿಂದ ತತ್ತರಿಸಿರುವ ಜನರ ರಕ್ಷಣೆಗೆ ಸರ್ಕಾರ ಕೈಗೊಂಡಿರುವ ಪರಿಹಾರ ಯೋಜನೆ ಸಮರ್ಪಕವಾಗಿ ಬಳಕೆಯಾಗಿದೆಯೇ (ತಾಲ್ಲೂಕುವಾರು ಸಂಪೂರ್ಣ ಮಾಹಿತಿ ಒದಗಿಸುವುದು)</td><td>ತುರ್ತು ಕುಡಿಯುವ ನೀರು ಪೂರೈಕೆ, ಮೇವು ಬ್ಯಾಂಕ್ ಸ್ಥಾಪನೆ, ಗೋ ಶಾಲೆಗಳ ಸ್ಥಾಪನೆ, ಜಾನುವಾರು ಸಂರಕ್ಷಣೆ ಮುಂತಾದ ಬರ ಪರಿಹಾರ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ. ಪ್ರಸ್ತುತ ರಾಜ್ಯದಲ್ಲಿ 327 ಗ್ರಾಮಗಳಿಗೆ 595 ಟ್ಯಾಂಕರ್ ಗಳ ಮೂಲಕ ಹಾಗೂ 420 ಖಾಸಗಿ ಬೋರ್‌ವೆಲ್ ಗಳನ್ನು ಬಾಡಿಗೆ ಆಧಾರದ ಮೇಲೆ ಪಡೆದು ಕುಡಿಯುವ ನೀರನ್ನು ಪೂರೈಸಲಾಗುತ್ತಿದೆ<br>ಅವಶ್ಯಕವಿದ್ದಲ್ಲಿ ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯಡಿ ಉದ್ಯೋಗದ ದಿವಸಗಳನ್ನು 100 ರಿಂದ 150 ದಿನಗಳಿಗೆ ಹೆಚ್ಚಿಸಲು ಕ್ರಮ ವಹಿಸಲಾಗಿದೆ<br>ಅವಶ್ಯಕತೆ ಇದ್ದಲ್ಲಿ ಮೇವು ಬ್ಯಾಂಕ್ ಮತ್ತು ಗೋಶಾಲೆ ತೆರೆಯಲು ಜಿಲ್ಲಾಧಿಕಾರಿಗಳಿಗೆ ಸೂಚನೆ ನೀಡಲಾಗಿದೆ.<br>ಮೇಲಿನಂತೆ ಬರ ಪರಿಹಾರ ಕಾರ್ಯಗಳನ್ನು ಸಮರ್ಪಕವಾಗಿ ಜಾರಿಗೊಳಿಸಲಾಗುತ್ತಿದೆ.</td></tr>
<tr><td>2</td><td>ಉತ್ತರ ಕರ್ನಾಟಕ ಭಾಗದಲ್ಲಿ ನಿರಂತರ ಬರಗಾಲವನ್ನು ಎದುರಿಸಲು ಸರ್ಕಾರ ಶಾಶ್ವತ ಪರಿಹಾರ ಕಂಡುಕೊಳ್ಳಲು ಯೋಚಿಸಿದೆಯೇ</td><td>ಇಂತಹ ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ.</td></tr>
<tr><td>3</td><td>ಬರಗಾಲದಿಂದ ತತ್ತರಿಸಿ ಉದ್ಯೋಗ ಮತ್ತು ಆಹಾರ ಅರಸಿ ಗುಳೇ ಹೋಗಿರುವ ಜನರ ಅಂಕಿ ಸಂಖ್ಯೆ ಸರ್ಕಾರದ ಬಳಿ ಇದೆಯೇ (ವಿವರ ನೀಡುವುದು)</td><td rowspan="2">ಜನರಿಗೆ ಉದ್ಯೋಗ ನೀಡುವ ದೃಷ್ಟಿಯಿಂದ ಮಹಾತ್ಮಾ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿಯಲ್ಲಿ ಅವಶ್ಯಕತೆ ಇದ್ದಲ್ಲಿ ಉದ್ಯೋಗದ ದಿವಸಗಳನ್ನು 100 ದಿನಗಳಿಂದ 150 ದಿನಗಳಿಗೆ ಹೆಚ್ಚಿಸಲು ಸೂಚಿಸಲಾಗಿದೆ. ಆದ್ದರಿಂದ ಬರ ಪರಿಸ್ಥಿತಿಯಿಂದ ಗುಳೇ ಹೋಗುತ್ತಿರುವ ಯಾವುದೇ ಪ್ರಕರಣಗಳು ವರದಿಯಾಗಿರುವುದಿಲ್ಲ.</td></tr>
<tr><td>4</td><td>ಜನ ಗುಳೇ ಹೋಗುತ್ತಿರುವುದನ್ನು ತಡೆಯಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು?</td></tr>
</table>

ಕಂಇ 53 ಟಿಎನ್‌ಆರ್ 2019

(ಆರ್.ವಿ. ದೇಶಪಾಂಡೆ)
ಕಂದಾಯ ಸಚಿವರು

ಕರ್ನಾಟಕ ಸರ್ಕಾರ

ಕಂಇ 50 ಟಿಎನ್‌ಆರ್ 2018

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ: 8/7/.2018

ಇಂದ:
ಸರ್ಕಾರದ ಕಾರ್ಯದರ್ಶಿಗಳು
ಕಂದಾಯ ಇಲಾಖೆ
ಬಹುಮಹಡಿಗಳ ಕಟ್ಟಡ
ಬೆಂಗಳೂರು.

ಇವರಿಗೆ:
ಕಾರ್ಯದರ್ಶಿಗಳು
ಕರ್ನಾಟಕ ವಿಧಾನ ಸಭೆ/ಪರಿಷತ್ತು
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಶ್ರೀ/~~ಶ್ರೀಮತಿ~~, ದೇವಾನಂದ್ ಫುಲಸಿಂಗ್ ಚವಾಣ್ (ನಾಗಠಾಣ)
ವಿಧಾನ ಸಭೆ/ ಪರಿಷತ್ ಸದಸ್ಯರು, ಇವರ ಚುಕ್ಕೆ ~~ಗುರುತಿನ~~/ಗುರುತಿಲ್ಲದ
ಪ್ರಶ್ನೆ ಸಂ: 348 ಕ್ಕೆ ಉತ್ತರ ನೀಡುವ ಬಗ್ಗೆ.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ವಿಧಾನ ಸಭೆ/~~ಪರಿಷತ್~~ ಸದಸ್ಯರಾದ ಶ್ರೀ/ಶ್ರೀಮತಿ ದೇವಾನಂದ್ ಪಿ. ಚವಾಣ್ ಇವರ ಚುಕ್ಕೆ ~~ಗುರುತಿನ~~/ಗುರುತಿಲ್ಲದ ಪ್ರಶ್ನೆ ಸಂ: 348 ಕ್ಕೆ ಉತ್ತರಗಳ ಪ್ರತಿಗಳನ್ನು ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಶ್ರೀಪತಿ ಪಿ.ಕೆ.)
ಶಾಖಾಧಿಕಾರಿ
ಕಂದಾಯ ಇಲಾಖೆ,(ವಿಪತ್ತು ನಿರ್ವಹಣೆ)

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 348
ಸದಸ್ಯರ ಹೆಸರು : ಶ್ರೀ ದೇವಾನಂದ್ ಫೂಲಸಿಂಗ್ ಚವಾಣ್ (ನಾಗಠಾಣ)
ಉತ್ತರಿಸುವವರು : ಕಂದಾಯ ಸಚಿವರು
ಉತ್ತರಿಸಬೇಕಾದ ದಿನಾಂಕ : 11.02.2019

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | ವಿಜಯಪುರ ಜಿಲ್ಲೆಯ ನಾಗಠಾಣ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಹಳ್ಳಿಗಳಲ್ಲಿ ಸತತ ಬರಗಾಲದಿಂದಾಗಿ ಅಂತರ್ಜಲ ಮಟ್ಟ ಕುಸಿದಿರುವ ಕಾರಣ ನೀರಿನ ಸಮಸ್ಯೆ ಎದುರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರದ ಕೈಗೊಂಡ ಕ್ರಮವೇನು; | ವಿಜಯಪುರ ಜಿಲ್ಲೆಯ ನಾಗಠಾಣ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಹಳ್ಳಿಗಳಲ್ಲಿ ಕುಡಿಯುವ ನೀರಿನ ಸಮಸ್ಯೆ ಇರುವುದು ಸರ್ಕಾರದ ಗಮನಕ್ಕೆ ಬಂದಿದ್ದು, ಈ ಸಂಬಂಧ ಕೆಳಕಂಡಂತೆ ಗ್ರಾಮಗಳಿಗೆ ಟ್ಯಾಂಕರ್ ಮೂಲಕ ನೀರು ಪೂರೈಕೆ ಮಾಡಲಾಗುತ್ತಿದೆ.<br><br>ಕ್ರ.ಸಂ / ಗ್ರಾಮದ ಹೆಸರು / ಟ್ಯಾಂಕರ್ ಸಂಖ್ಯೆ<br>1 / ಕನ್ನೂರ / 18<br>2 / ಮಡಸನಾಳ / 06<br>3 / ಡೋಮನಾಳ / 04<br>4 / ತಿಡಗುಂದಿ / 01<br>5 / ಮಖಣಾಪುರ / 10 |
| 2 | ಈ ಬರಗಾಲ ನಿರ್ವಹಣೆಗೆ ಸರ್ಕಾರ ಕೈಗೊಂಡ ಕ್ರಮವೇನು; | 2018-19ನೇ ಸಾಲಿನಲ್ಲಿ ಸರ್ಕಾರದಿಂದ ಟಾಸ್ಕ್ ಫೋರ್ಸ್ ಯೋಜನೆಯಡಿ 1ನೇ ಹಂತದಲ್ಲಿ ಪ್ರತಿ ತಾಲ್ಲೂಕಿಗೆ ರೂ.50.00 ಲಕ್ಷದಂತೆ ಅನುಮೋದನೆಯಾಗಿದ್ದು, ವಿಜಯಪುರ ಮತ್ತು ಇಂಡಿ ತಾಲ್ಲೂಕಿನ ನಾಗಠಾಣ ಮತ ಕ್ಷೇತ್ರಕ್ಕೆ ರೂ.32.80 ಲಕ್ಷ ಅನುದಾನದಲ್ಲಿ 16 ಕಾಮಗಾರಿಗಳು ಅನುಷ್ಠಾನಗೊಳಿಸಲಾಗಿದೆ. 2ನೇ ಹಂತದಲ್ಲಿ ಪ್ರತಿ ತಾಲ್ಲೂಕಿಗೆ ರೂ.50.00 ಲಕ್ಷ ಅನುದಾನ ಮಂಜೂರಾಗಿದ್ದು, ಅದರಂತೆ ವಿಜಯಪುರ ತಾಲ್ಲೂಕಿನ ನಾಗಠಾಣ ಮತ ಕ್ಷೇತ್ರದಲ್ಲಿ ಕುಡಿಯುವ ನೀರಿನ 11 ಕಾಮಗಾರಿಗಳನ್ನು ರೂ.18.00 ಲಕ್ಷ ಮೊತ್ತಕ್ಕೆ ಪ್ರಸ್ತಾಪಿಸಿದ್ದು, ಹಾಗೂ ಇಂಡಿ ತಾಲ್ಲೂಕಿನ ನಾಗಠಾಣ ಮತ ಕ್ಷೇತ್ರದ ಕಾಮಗಾರಿಗಳ ವಿವರ ಆದಷ್ಟು ಬೇಗನೆ ಪಡೆದು ಸದರಿ ಕಾಮಗಾರಿಗಳ ಅನುಷ್ಠಾನಕ್ಕೆ ಕ್ರಮ ವಹಿಸಲಾಗುವುದು. |
| 3 | ಬರಗಾಲ ನಿರ್ವಹಣೆಗೆ ಟಾಸ್ಕ್ ಫೋರ್ಸ್ ನಡಿ ನೀಡಲಾಗುವ ಅನುದಾನ ಕಡಿಮೆಯಾಗಿರುವುದರಿಂದ ಇದನ್ನು ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? | ಅನುದಾನದ ಲಭ್ಯತೆ ಮತ್ತು ಅವಶ್ಯಕತೆಗನುಸಾರ ಅನುದಾನ ಬಿಡುಗಡೆ ಮಾಡಲಾಗುತ್ತಿದ್ದು, ಹೆಚ್ಚಿಸುವ ಪ್ರಸ್ತಾವನೆ ಸಧ್ಯಕ್ಕೆ ಸರ್ಕಾರದ ಮುಂದೆ ಇರುವುದಿಲ್ಲ. |

ಕಂಇ 50 ಟಿಎನ್ಆರ್ 2019

(ಆರ್.ವಿ. ದೇಶಪಾಂಡೆ)
ಕಂದಾಯ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಕಂಇ 23 ಎಂವಿಎಸ್ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 08.02.2019.

ಇವರಿಂದ:
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಕಂದಾಯ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು–560001.

ಇವರಿಗೆ:
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

*ವಿಷಯ:* ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಬಾಲಚಂದ್ರ ಲಕ್ಷ್ಮಣರಾವ್ ಜಾರಕಿಹೋಳಿ (ಅರಭಾವಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 205ಕ್ಕೆ ಉತ್ತರ ನೀಡುವ ಬಗ್ಗೆ.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ ಬಾಲಚಂದ್ರ ಲಕ್ಷ್ಮಣರಾವ್ ಜಾರಕಿಹೋಳಿ (ಅರಭಾವಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 205ಕ್ಕೆ ಉತ್ತರದ 150 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಾನು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,
8/2/19
(ಬಿ.ಎನ್. ಭಾಗ್ಯ)
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–1).

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 205
ಸದಸ್ಯರ ಹೆಸರು : ಶ್ರೀ ಬಾಲಚಂದ್ರ ಲಕ್ಷ್ಮಣರಾವ್ ಜಾರಕಿಹೋಳಿ (ಅರಭಾವಿ)
ಉತ್ತರಿಸಬೇಕಾದ ದಿನಾಂಕ : 11.02.2019
ಉತ್ತರಿಸಬೇಕಾದ ಸಚಿವರು : ಕಂದಾಯ ಸಚಿವರು

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆಯಲ್ಲಿ ಹೊಸದಾಗಿ ರಚನೆಗೊಂಡಿರುವ ಮೂಡಲಗಿ ತಾಲ್ಲೂಕಿಗೆ ತಹಶೀಲ್ದಾರವರನ್ನು ಹೊರತುಪಡಿಸಿ ಉಳಿದ ಸಿಬ್ಬಂದಿ ವರ್ಗದವರನ್ನು ನೇಮಕಗೊಳಿಸದಿರುವುದರಿಂದ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬಂದಿದೆ. |
| ಆ) | ತಹಶೀಲ್ದಾರ್‌ರವರಿಗೆ ಯಾವುದೇ ವಾಹನ ಸೌಲಭ್ಯ ಇಲ್ಲದಿರುವುದರಿಂದ ದ್ವಿಚಕ್ರ ವಾಹನದಲ್ಲಿ ಸಂಚರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಜಿಲ್ಲಾಧಿಕಾರಿಗಳ ಕಛೇರಿಯ ಆದೇಶ ಸಂಖ್ಯೆ: ಡಿಸಿ/ವಾಹನ/ಸಿಆರ್-02/ 2018-19. ದಿನಾಂಕ:16-01-2019ರಲ್ಲಿ ತಹಶೀಲ್ದಾರ್ ಮೂಡಲಗಿ ಇವರಿಗೆ ವಾಹನ ಸಂಖ್ಯೆ: ಕೆಎ-22 ಜೆ-384 ನ್ನು ಹಂಚಿಕೆ ಮಾಡಲಾಗಿರುತ್ತದೆ. |
| ಇ) | ಹಾಗಿದ್ದಲ್ಲಿ, ಮೂಡಲಗಿ ತಾಲ್ಲೂಕಿನ ತಹಶೀಲ್ದಾರ ಕಛೇರಿಗೆ ಕೂಡಲೇ ಸಿಬ್ಬಂದಿ ಹಾಗೂ ವಾಹನ ವ್ಯವಸ್ಥೆಯನ್ನು ಯಾವಾಗ ಒದಗಿಸಲಾಗುವುದು (ವಿವರ ನೀಡುವುದು) | ಮೂಡಲಗಿ ತಾಲ್ಲೂಕಿನ ತಹಶೀಲ್ದಾರ್ ಕಛೇರಿಗೆ ಈ ಕೆಳಕಂಡಂತೆ ಹುದ್ದೆಗಳನ್ನು ಸೃಜಿಸಲಾಗಿರುತ್ತದೆ. (see table below) ತಹಶೀಲ್ದಾರ್ ಗ್ರೇಡ್-1 ಹುದ್ದೆಯನ್ನು ನೇಮಕ ಮಾಡಲಾಗಿದೆ. ಉಳಿದ "ಸಿ" ವೃಂದದ ಸಿಬ್ಬಂದಿಗಳನ್ನು ಕಾರ್ಯಾರ್ಥ (ವರ್ಕ್ ಅರೇಂಜ್‌ಮೆಂಟ್ಸ್) ವ್ಯವಸ್ಥೆ ಮೇಲೆ ನಿಯೋಜನೆ ಮಾಡಲಾಗಿರುತ್ತದೆ. |

| ಕ್ರ. ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆ |
|---|---|---|
| 1 | ತಹಶಿಲ್ದಾರ್ ಗ್ರೇಡ್-1 | 01 |
| 2 | ತಹಶೀಲ್ದಾರ್ ಗ್ರೇಡ್-2 | 01 |
| 3 | ಶಿರಸ್ತೇದಾರ್ | 02 |
| 4 | ಪ್ರ.ದ.ಸ | 03 |
| 5 | ಆಹಾರ ನಿರೀಕ್ಷಕರು | 01 |
| 6 | ದ್ವಿ.ದ.ಸ | 04 |
| 7 | ಬೆರಳಚ್ಚುಗಾರ/ಡಾಟಾ ಎಂಟ್ರಿ ಆಪರೇಟರ್ | 01 |
| 8 | ಗ್ರೂಪ್ "ಡಿ" | 03 |
| 9 | ವಾಹನ ಚಾಲಕರು | 01 |
| | ಒಟ್ಟು | 17 |

ಕಂಇ 23 ಎಂಬಿಎಸ್ 2019

(ಆರ್.ವಿ. ದೇಶಪಾಂಡೆ)
ಕಂದಾಯ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಕಂಇ 19 ಬಿಎಂಎಂ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 08.02.2019.

ಇವರಿಂದ:
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಕಂದಾಯ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು–560001.

ಇವರಿಗೆ:
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

*ವಿಷಯ:* ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ನಿರಂಜನ್ ಕುಮಾರ್ ಸಿ.ಎಸ್ (ಗುಂಡ್ಲುಪೇಟೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 504ಕ್ಕೆ ಉತ್ತರ ನೀಡುವ ಬಗ್ಗೆ.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ನಿರಂಜನ್ ಕುಮಾರ್ ಸಿ.ಎಸ್ (ಗುಂಡ್ಲುಪೇಟೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 504ಕ್ಕೆ ಉತ್ತರದ 150 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಾನು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,
8/2/19
(ಬಿ.ಎನ್. ಭಾಗ್ಯ)
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–1).

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 504
ಸದಸ್ಯರ ಹೆಸರು : ಶ್ರೀ ನಿರಂಜನ್ ಕುಮಾರ್ ಸಿ.ಎಸ್ (ಗುಂಡ್ಲುಪೇಟೆ)
ಉತ್ತರಿಸಬೇಕಾದ ದಿನಾಂಕ : 11.02.2019
ಉತ್ತರಿಸಬೇಕಾದ ಸಚಿವರು : ಕಂದಾಯ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕು ಕಛೇರಿಯಲ್ಲಿ ಅಧಿಕಾರಿ ಹಾಗೂ ಸಿಬ್ಬಂದಿಗಳ ಕೊರತೆಯಿಂದ ಜನಸಾಮಾನ್ಯರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| 2 | ಬಂದಿದ್ದಲ್ಲಿ, ತಾಲ್ಲೂಕು ಕಛೇರಿಯಲ್ಲಿ ಹಾಗೂ ನಾಡಕಛೇರಿಗಳಲ್ಲಿ ಎಷ್ಟು ಸಿಬ್ಬಂದಿಗಳ ಕೊರತೆ ಇದೆ. (ಮಾಹಿತಿ ನೀಡುವುದು) | ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕು ಕಛೇರಿ ಹಾಗೂ ನಾಡಕಛೇರಿಗಳನ್ನೊಳಗೊಂಡಂತೆ ಖಾಲಿ ಇರುವ ಹುದ್ದೆಗಳ ವಿವರ ಈ ಕೆಳಕಂಡಂತಿದೆ. |

| ಕ್ರ. ಸಂ | ವೃಂದ | ಖಾಲಿ ಇರುವ ಹುದ್ದೆಗಳ ಸಂಖ್ಯೆ |
|---|---|---|
| 1 | ತಹಶೀಲ್ದಾರ್ ಗ್ರೇಡ್-2 | 01 |
| 2 | ಉಪತಹಶೀಲ್ದಾರ್/ ಶಿರಸ್ತೇದಾರ್ | 04 |
| 3 | ಪ್ರ.ದ.ಸ/ ಪ್ರಥಮ ದರ್ಜೆ ರಾಜಸ್ವ ನಿರೀಕ್ಷಕರು | 08 |
| 4 | ಗ್ರಾಮಲೆಕ್ಕಿಗರು | 14 |
| 5 | ಬೆರಳಚ್ಚುಗಾರರು | 02 |
| 6 | ವಾಹನಚಾಲಕರು | 01 |
| 7 | ಗ್ರೂಪ್ "ಡಿ" | 05 |
| | **ಒಟ್ಟು** | **35** |

| 3 | ಗುಂಡ್ಲುಪೇಟೆ ತಾಲ್ಲೂಕು ಕಛೇರಿಯಲ್ಲಿ ಮಂಜೂರಾದ ಹುದ್ದೆಗಳ ಸಂಖ್ಯೆ ಎಷ್ಟು; (ನಿಯೋಜನೆ ಸಹಿತ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳು ಹಾಗೂ ಸಿಬ್ಬಂದಿಗಳ ವೃಂದವಾರು ವಿವರ ಒದಗಿಸುವುದು) | ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕು ಕಛೇರಿಯಲ್ಲಿ ಮಂಜೂರಾದ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ ನೌಕರರುಗಳ ವಿವರ ಈ ಕೆಳಕಂಡಂತಿದೆ:- |
|---|---|---|
| 4 | ಪ್ರಸ್ತುತ, ಕರ್ತವ್ಯ ನಿರ್ವಹಿಸುತ್ತಿರುವ ಹುದ್ದೆಗಳು ಹಾಗೂ ಖಾಲಿ ಇರುವ ಹುದ್ದೆಗಳ ಸಂಖ್ಯೆ ಎಷ್ಟು; | (ಕೆಳಗಿನ ಪಟ್ಟಿ ನೋಡಿ) |

| ಕ್ರ. ಸಂ | ವೃಂದ | ಮಂಜೂರಾದ ಹುದ್ದೆಗಳು | ಭರ್ತಿಯಾದ ಹುದ್ದೆಗಳ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ |
|---|---|---|---|---|
| 1 | ತಹಶೀಲ್ದಾರ್ ಗ್ರೇಡ್-1 | 01 | 01 | 00 |
| 2 | ತಹಶೀಲ್ದಾರ್ ಗ್ರೇಡ್-2 | 01 | 00 | 01 |
| 3 | ಉಪತಹಶೀಲ್ದಾರ್/ ಶಿರಸ್ತೇದಾರ್ | 07 | 03 | 04 |
| 4 | ಪ್ರ.ದ.ಸ/ ಪ್ರಥಮ ದರ್ಜೆ ರಾಜಸ್ವ ನಿರೀಕ್ಷಕರು | 12 | 04 | 08 |
| 5 | ದ್ವಿ.ದ.ಸ | 16 | 16 | 00 |
| 6 | ಗ್ರಾಮಲೆಕ್ಕಿಗರು | 70 | 56 | 14 |
| 7 | ಬೆರಳಚ್ಚುಗಾರರು | 03 | 01 | 02 |
| 8 | ವಾಹನಚಾಲಕರು | 01 | 00 | 01 |
| 9 | ಗ್ರೂಪ್ "ಡಿ" | 12 | 07 | 05 |
| | **ಒಟ್ಟು** | **123** | **88** | **35** |

ನಿಯೋಜನೆ ಮೇಲೆ ಯಾರೂ ಕರ್ತವ್ಯ ನಿರ್ವಹಿಸುತ್ತಿರುವುದಿಲ್ಲ.

| 5 | ತಾಲ್ಲೂಕು ಕಛೇರಿಯಲ್ಲಿ ಅಗತ್ಯ ಸಿಬ್ಬಂದಿ ಒದಗಿಸಲು ಖಾಲಿ ಇರುವ ಹುದ್ದೆಗಳ ಭರ್ತಿಗೆ ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ? (ಸಂಪೂರ್ಣ ವಿವರ ಒದಗಿಸುವುದು) | ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ/ ಸಿಬ್ಬಂದಿಗಳಿಂದಲೇ ನಿಗದಿತ ಅವಧಿಯಲ್ಲಿ ಕಾರ್ಯನಿರ್ವಹಿಸಿ ಜನಸಾಮಾನ್ಯರಿಗೆ ಯಾವುದೇ ತೊಂದರೆಯಾಗದಂತೆ ಕ್ರಮವಹಿಸಲಾಗುತ್ತಿದೆ. ಖಾಲಿ ಇರುವ ಹುದ್ದೆಗಳನ್ನು ಚಾಲ್ತಿ ಇರುವ ವೃಂದ ಮತ್ತು ನೇಮಕಾತಿ ನಿಯಮಗಳನುಸಾರ ಭರ್ತಿ ಮಾಡಲು ಕ್ರಮ ವಹಿಸಲಾಗುವುದು. |
|---|---|---|

ಕಂಇ 19 ಬಿಎಂಎಂ 2019

**(ಆರ್.ವಿ. ದೇಶಪಾಂಡೆ)**
ಕಂದಾಯ ಸಚಿವರು

ಕರ್ನಾಟಕ ಸರ್ಕಾರ

ಸಂ:ಮಮಇ 44 ICD 2019

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 11-2-2019

**ಇವರಿಂದ:**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ,
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ / ~~ಪರಿಷತ್~~ ಸಚಿವಾಲಯ,
ವಿಧಾನಸೌಧ,
ಬೆಂಗಳೂರು

ಮಾನ್ಯರೆ,

**ವಿಷಯ:** ಶ್ರೀ/~~ಶ್ರೀಮತಿ~~. ನಿಸರ್ಗ ನಾರಾಯಣಸ್ವಾಮಿ L.N ಮಾನ್ಯ ವಿಧಾನ ಸಭಾ /~~ವಿಧಾನ ಪರಿಷತ್~~ ಸದಸ್ಯರು ಇವರು ಮಂಡಿಸಿರುವ ಚುಕ್ಕೆ ~~ಗುರುತಿನ~~ / ಗುರುತಿಲ್ಲದ ಪ್ರಶ್ನೆ ಸಂಖ್ಯೆ:-345-ಕ್ಕೆ ಉತ್ತರಿಸುವ ಕುರಿತು

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ/~~ಶ್ರೀಮತಿ~~. ನಿಸರ್ಗ ನಾರಾಯಣಸ್ವಾಮಿ. L.N. ಮಾನ್ಯ ವಿಧಾನ ಸಭಾ /~~ವಿಧಾನ ಪರಿಷತ್~~ ಸದಸ್ಯರು ಇವರು ಮಂಡಿಸಿರುವ ಚುಕ್ಕೆ ~~ಗುರುತಿನ~~ / ಗುರುತಿಲ್ಲದ ಪ್ರಶ್ನೆ ಸಂಖ್ಯೆ:-345-ಕ್ಕೆ ಉತ್ತರವನ್ನು -100- ಪ್ರತಿಗಳಲ್ಲಿ ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

S. Nalini
(ಸಂಧ್ಯಾ ಎಲ್ ನಾಯಕ್)
ಸರ್ಕಾರದ ಅಧೀನ ಕಾರ್ಯದರ್ಶಿ-1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆ.

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 345

ವಿಧಾನ ಸಭೆ ಸದಸ್ಯರ ಹೆಸರು : ಶ್ರೀಮತಿ ನಿಸರ್ಗ ನಾರಾಯಣಸ್ವಾಮಿ ಎಲ್.ಎನ್

ಉತ್ತರಿಸುವವರು : ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು

ಉತ್ತರಿಸಬೇಕಾದ ದಿನಾಂಕ : 11.02.2019

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದೇವನಹಳ್ಳಿ ತಾಲ್ಲೂಕಿನಲ್ಲಿರುವ ಅಂಗನವಾಡಿ ಕೇಂದ್ರಗಳೆಷ್ಟು; ಎಲ್ಲಾ ಅಂಗನವಾಡಿ ಕೇಂದ್ರಗಳಿಗೂ ಸ್ವಂತ ಕಟ್ಟಡ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ದೇವನಹಳ್ಳಿ ತಾಲ್ಲೂಕಿನಲ್ಲಿರುವ ಅಂಗನವಾಡಿ ಕೇಂದ್ರಗಳು:263<br>ಎಲ್ಲಾ ಅಂಗನವಾಡಿ ಕೇಂದ್ರಗಳಿಗೆ ಸ್ವಂತ ಕಟ್ಟಡಗಳಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಹಾಗಿದ್ದಲ್ಲಿ, ಸ್ವಂತ ಕಟ್ಟಡ ಕಟ್ಟಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ದೇವನಹಳ್ಳಿ ತಾಲ್ಲೂಕಿನಲ್ಲಿ ಸ್ವಂತ ಕಟ್ಟಡ ಇಲ್ಲದೇ ಇರುವ 43 ಅಂಗನವಾಡಿ ಕೇಂದ್ರಗಳಿಗೆ ನಿವೇಶನಗಳ ಅವಶ್ಯಕತೆಯಿರುತ್ತದೆ. ಸಂಬಂಧಿಸಿದ ಗ್ರಾಮ ಪಂಚಾಯತ್, ತಾಲ್ಲೂಕು ಪಂಚಾಯತ್ ಮತ್ತು ಪುರಸಭೆ ಕಚೇರಿಗಳಿಗೆ ನಿವೇಶನ ಒದಗಿಸಲು ಕೋರಲಾಗಿರುತ್ತದೆ. |
| ಇ) | ಯಾವ ಕಾಲಮಿತಿಯಲ್ಲಿ ಕಟ್ಟಡ ಕಟ್ಟಲು ಹಾಗೂ ಶಿಥಿಲಗೊಂಡ ಅಂಗನವಾಡಿ ಕೇಂದ್ರಗಳ ದುರಸ್ತಿಗೆ ಕ್ರಮ ಕೈಗೊಳ್ಳಲಾಗುವುದು? (ಪೂರ್ಣ ವಿವರ ನೀಡುವುದು) | ಶಿಥಿಲಗೊಂಡ ಕಟ್ಟಡಗಳು ಹಾಗೂ ಸ್ವಂತ ಕಟ್ಟಡಗಳಿಲ್ಲದ ಅಂಗನವಾಡಿ ಕೇಂದ್ರಗಳಿಗೆ ನಿವೇಶನ ಲಭ್ಯತೆ ಮತ್ತು ಅನುದಾನ ಲಭ್ಯತೆಗನುಗುಣವಾಗಿ ವಿವಿಧ ಯೋಜನೆಗಳಡಿಯಲ್ಲಿ ಹಂತಹಂತವಾಗಿ ಕಟ್ಟಡಗಳನ್ನು ನಿರ್ಮಾಣ ಮಾಡಲಾಗುತ್ತದೆ.<br>2018-19 ನೇ ಸಾಲಿನಲ್ಲಿ ಅಂಗನವಾಡಿ ಕಟ್ಟಡಗಳ ನಿರ್ವಹಣೆ ಯೋಜನೆಯಡಿ ರೂ.15.00 ಲಕ್ಷ ಅನುದಾನ ಬಿಡುಗಡೆ ಮಾಡಿದ್ದು 15 ಅಂಗವಾಡಿ ಕೇಂದ್ರಗಳ ದುರಸ್ತಿ ಮಾಡಲು ಕ್ರಮ ಕೈಗೊಳ್ಳಲಾಗಿದೆ. |

ಸಂ:ಮಮಇ 44 ಐಸಿಡಿ 2019

(ಡಾ. ಜಯಮಾಲ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಕರ್ನಾಟಕ ಸರ್ಕಾರ

ಸಂಖ್ಯೆ: ಆರ್‌ಡಿ 04 ಎಲ್‌ಜಿಕ್ಯೂ 2019

ಕರ್ನಾಟಕ ಸರ್ಕಾರ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 11.02.19.

**ಇವರಿಂದ:**

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಕಂದಾಯ ಇಲಾಖೆ,
**ಬೆಂಗಳೂರು.**

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

ವಿಷಯ: ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ಡಾ। ಶ್ರೀನಿವಾಸ ಮೂರ್ತಿ ಕೆ ರವರು ಮಂಡಿಸಿರುವ ಚುಕ್ಕೆ ~~ಗುರುತು~~/ಗುರುತಿಲ್ಲದ ಪ್ರಶ್ನೆ ಸಂಖ್ಯೆ: 547 ಕ್ಕೆ ಉತ್ತರ ಒದಗಿಸುವ ಬಗ್ಗೆ.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆ ಸದಸ್ಯರಾದ ಡಾ। ಶ್ರೀನಿವಾಸ ಮೂರ್ತಿ ಕೆ ಇವರು ಮಂಡಿಸಿರುವ ಚುಕ್ಕೆ ~~ಗುರುತು~~/ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 547 ಕ್ಕೆ ಸಂಬಂಧಿಸಿದಂತೆ ಉತ್ತರದ ____ ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ ಎಂದು ತಿಳಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

11.2.19

**(ಎಸ್.ಎಲ್.ಮಹಾಂತೇಗೌಡ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ ಭೂಮಂಜೂರಾತಿ-1

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 547

ಸದಸ್ಯರ ಹೆಸರು : ಡಾ॥ ಶ್ರೀನಿವಾಸಮೂರ್ತಿ .ಕೆ. (ನೆಲಮಂಗಲ)

ಉತ್ತರಿಸುವ ದಿನಾಂಕ : 11-02-2019

ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಯಲಹಂಕ ವಿಧಾನಸಭಾ ಕ್ಷೇತ್ರದಲ್ಲಿ ಬರುವ ಬೆಂಗಳೂರು ಉತ್ತರ ತಾಲ್ಲೂಕು ದಾಸನಪುರ ಹೋಬಳಿ ಕಡಬಗೆರೆ ಸರ್ವೆ ನಂಬರ್ 159 ರಲ್ಲಿ ಗೋಮಾಳ ಜಮೀನಿನ ವಿಸ್ತೀರ್ಣವೆಷ್ಟು; (ವಿವರ ನೀಡುವುದು) | ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಕಡಬಗೆರೆ ಸ.ನಂ.159 ರಲ್ಲಿ ಆಕಾರಬಂದ್‌ನಂತೆ ಒಟ್ಟು 26-39 ಎಕರೆ/ಗುಂಟೆ ವಿಸ್ತೀರ್ಣವಿರುತ್ತದೆ. |
| ಆ) | ಈ ಜಮೀನಿನಲ್ಲಿ ಮಂಚನಬೆಲೆ ಜಲಾಶಯದಲ್ಲಿ ಮುಳುಗಡೆಗೊಂಡ ರೈತರಿಗೆ ವಿತರಿಸಿರುವ ಜಮೀನು ಎಷ್ಟು; ಇದರಲ್ಲಿ ರೈತರಿಗೆ ಎಲ್ಲಾ ಖಾತಾ ದಾಖಲಾತಿಗಳನ್ನು ಮಾಡಿಕೊಡಲಾಗಿದೆಯೇ; (ಸಂಪೂರ್ಣ ವಿವರ ನೀಡುವುದು) | ಮಂಚನಬೆಲೆ ಜಲಾಶಯದಲ್ಲಿ ಮುಳಗಡೆಗೊಂಡ ನಿರಾಶ್ರಿತರ ಪೈಕಿ ಒಟ್ಟು 17 ಮಂದಿ ರೈತರಿಗೆ ಒಟ್ಟು 12-00 ಎಕರೆ ವಿಸ್ತೀರ್ಣದ ಜಮೀನು ತಹಶೀಲ್ದಾರ್, ನೆಲಮಂಗಲ ತಾಲ್ಲೂಕು ರವರ ಅಧಿಕೃತ ಜ್ಞಾಪನ ಪತ್ರದ ಸಂಖ್ಯೆ:ಎಲ್‌ಎನ್‌ಡಿ.ಎಸ್‌ಆರ್:8/83-84 ರಂತೆ ಮಂಜೂರಾಗಿದ್ದು, ಈ ಪೈಕಿ 13 ಮಂದಿ ರೈತರಿಗೆ ಒಟ್ಟು 9-20 ಎ:ಗುಂ. ವಿಸ್ತೀರ್ಣದ ಜಮೀನಿಗೆ ಸಾಗುವಳಿ ಚೀಟಿ ವಿತರಿಸಿ ಖಾತೆ ಬದಲಾವಣೆ ಮಾಡಿರುವುದು ಕಂಡು ಬಂದಿರುತ್ತದೆ ಹಾಗೂ 4 ಜನರಿಗೆ 2-20 ಎ:ಗುಂ. ಜಮೀನಿನ ಖಾತೆ ಬದಲಾವಣೆಗೆ ಸಂಬಂಧಿಸಿದಂತೆ ಸದರಿಯವರುಗಳು ಸ್ವಾಧೀನಾನುಭವದಲ್ಲಿರುವುದಿಲ್ಲವಾದ್ದರಿಂದ ಖಾತೆ ಬದಲಾವಣೆ ಮಾಡಿರುವುದಿಲ್ಲ. |
| ಇ) | ಜಮೀನು ಮುಳುಗಡೆಗೊಂಡ ರೈತರಿಗೆ ವಿತರಿಸಿರುವುದನ್ನು ಬಿಟ್ಟು ಇನ್ನೂ ಎಷ್ಟು ಗೋಮಾಳದ ಜಮೀನು ಬಾಕಿ ಇದೆ; (ಸಂಪೂರ್ಣ ವಿವರ ನೀಡುವುದು) | ಮಂಚನಬೆಲೆ ಜಲಾಶಯದಲ್ಲಿ ಮುಳಗಡೆಗೊಂಡ ರೈತರಿಗೆ ವಿತರಿಸಿರುವುದನ್ನು ಬಿಟ್ಟು ಉಳಿಕೆ 14-39 ಎ:ಗುಂ. ವಿಸ್ತೀರ್ಣದ ಜಮೀನಿದ್ದು, ವಿವಿಧ ನ್ಯಾಯಾಲಯಗಳಲ್ಲಿ ಪ್ರಕರಣ ವಿಚಾರಣಾ ಹಂತದಲ್ಲಿರುತ್ತದೆ. |
| ಈ) | ಉಳಿದಿರುವ ಜಮೀನನ್ನು ಅತಿಕ್ರಮಣ ಮಾಡಿಕೊಂಡಿದ್ದಾರೆಯೇ? (ವಿವರ ನೀಡುವುದು) | a) ಶ್ರೀ.ನಾಗರಾಜು ಬಿನ್ ಚಿಕ್ಕಹನುಮಯ್ಯ ಮತ್ತು ಶ್ರೀ.ಚಿಕ್ಕನಾಗರಾಜು ಬಿನ್ ಚಿಕ್ಕಹನುಮಯ್ಯ ರವರಿಗೆ 5-20 ಎ:ಗುಂ. ವಿಸ್ತೀರ್ಣದ ಜಮೀನಿನ ಮಂಜೂರಾತಿ ಬಗ್ಗೆ ದಾಖಲೆಗಳ ನೈಜತೆ ಪರಿಶೀಲನೆಗಾಗಿ ಮಾನ್ಯ ಜಿಲ್ಲಾಧಿಕಾರಿಗಳ ನ್ಯಾಯಾಲಯದಲ್ಲಿ ಕರ್ನಾಟಕ ಭೂ ಕಂದಾಯ ಕಾಯ್ದೆ 1964 ರ 136(3)ರಡಿ ಪ್ರಕರಣ ಚಾಲ್ತಿಯಲ್ಲಿರುತ್ತದೆ.<br>b) ಶ್ರೀ.ಎಂ.ಟಿ.ರಾಮಲಿಂಗಯ್ಯ ರವರಿಗೆ 8-00 ಎಕರೆ ವಿಸ್ತೀರ್ಣದ ಜಮೀನಿಗೆ ಸಂಬಂಧಿಸಿದಂತೆ ಮಾನ್ಯ ಸಿವಿಲ್ ನ್ಯಾಯಾಲಯದ ಪ್ರಕರಣ ಸಂಖ್ಯೆ: ಓ.ಎಸ್.ನಂ.394/1998 ರಲ್ಲಿ ಮೇಲ್ಕಂಡವರ ಪರವಾಗಿ ಆದೇಶಿಸಿದ್ದು, ಆದರೆ ಸದರಿ ಆದೇಶದ ವಿರುದ್ಧ ಮೇಲ್ಮನವಿ (Regular Appeal) ದಾಖಲಿಸಲು ಸರ್ಕಾರದ ಆದೇಶವಾಗಿದೆ.<br>c) ಉಳಿಕೆ 1-19 ಎ:ಗುಂ. ಪೈಕಿ ರಸ್ತೆಯಾಗಿ ಉಪಯೋಗಿಸಲ್ಪಡುತ್ತಿರುತ್ತದೆ ಹಾಗೂ 0-19 ಗುಂಟೆ ಕೆ.ಎನ್.ಈರೇಗೌಡ, ಕೆ.ಎನ್.ಮುನಿರಾಜು ಮತ್ತು ಇತರರು ಮಾಡಿಕೊಂಡಿರುವುದಾಗಿ ಕಂಡುಬಂದಿರುವ ಒತ್ತುವರಿಯನ್ನು ತೆರವುಗೊಳಿಸಲು ಸರ್ವೆ ಕಾರ್ಯ ಪ್ರಗತಿಯಲ್ಲಿರುತ್ತದೆ. |

**ಸಂಖ್ಯೆ: ಆರ್‌ಡಿ 04 ಎಲ್‌ಜಿಕ್ಯೂ 2019**

**(ಆರ್.ವಿ.ದೇಶಪಾಂಡೆ)**
**ಕಂದಾಯ ಸಚಿವರು**

**ಕರ್ನಾಟಕ ಸರ್ಕಾರ**

ಸಂಖ್ಯೆ: ಅಪಜೀ 14 ಎಫ್‌ಎಲ್‌ಎಲ್ 2019

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು ದಿನಾಂಕ: 08.02.2019.

ಇವರಿಂದ
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,
ಬಹುಮಹಡಿಗಳ ಕಟ್ಟಡ, ಬೆಂಗಳೂರು.

ಇವರಿಗೆ
ಸರ್ಕಾರದ ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ, ಬೆಂಗಳೂರು.
ಮಾನ್ಯರೆ,

ವಿಷಯ: ಕರ್ನಾಟಕ ವಿಧಾನಸಭೆಯ ಮಾನ್ಯ ಸದಸ್ಯರಾದ ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 276ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ: ಪ್ರಶಾವಿಸ/15ನೇವಿಸ/3ಅ/ಪ್ರಸಂ.276/2019 ದಿನಾಂಕ: 02.02.2019

*********

ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 276ರ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ನಿಮ್ಮ ನಂಬುಗೆಯ

(ಅರ್ಚನ ಎಂ.ಎಸ್) 8/2/2019
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 276
ಸದಸ್ಯರ ಹೆಸರು : ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ)
ಉತ್ತರಿಸುವ ದಿನಾಂಕ : 11-02-2019
ಉತ್ತರಿಸುವ ಸಚಿವರು : ಮಾನ್ಯ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

*****

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮೀಸಲು ಅರಣ್ಯ ಅಥವಾ ವನ್ಯಜೀವಿ ಅರಣ್ಯ ಪ್ರದೇಶಗಳ ಮಧ್ಯ ಜನವಸತಿ ಪ್ರದೇಶಗಳಿದ್ದು, ಈ ಪ್ರದೇಶಗಳನ್ನು ಸಂಪರ್ಕಿಸಲು ಇರುವ ಕಚ್ಚಾರಸ್ತೆಗಳನ್ನು ಅಭಿವೃದ್ಧಿ ಪಡಿಸಲು ಅರಣ್ಯ ಇಲಾಖೆಯಿಂದ ನಿರ್ಬಂಧ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಂತಹ ಪ್ರಕರಣಗಳಲ್ಲಿ ಕಚ್ಚಾರಸ್ತೆಗಳನ್ನು ಅಭಿವೃದ್ಧಿ ಪಡಿಸಲು ಉಪಯೋಗಿ ಸಂಸ್ಥೆಯು ಅರಣ್ಯ (ಸಂರಕ್ಷಣೆ) ಕಾಯ್ದೆ, 1980 ಕಲಂ 2 ಅಡಿಯಲ್ಲಿ ಕಲ್ಪಿಸಿಕೊಳ್ಳಲಾಗಿರುವ ಉಪಬಂಧಗಳನ್ವಯ ಅಗತ್ಯ ಪ್ರಸ್ತಾವನೆಯನ್ನು ಕೇಂದ್ರ ಸರ್ಕಾರದ ವೆಬ್ ಪೋರ್ಟಲ್ www.parivesh.nic.in ಮೂಲಕ ಸಲ್ಲಿಸಿದ ನಂತರ, ನಿಯಮಾನುಸಾರ ಪರಿಶೀಲಿಸಿ ಸೂಕ್ತ ಕ್ರಮವಹಿಸಲಾಗುವುದು. |
| ಆ) | ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರದ ನಿಲುವೇನು? | |

ಸಂಖ್ಯೆ: ಎಫ್‌ಇಇ 14 ಎಫ್‌ಎಲ್‌ಎಲ್ 2019

(ಸತೀಶ್ ಎಲ್ ಜಾರಕಿಹೊಳಿ)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

**ಕರ್ನಾಟಕ ಸರ್ಕಾರ**

ಸಂಖ್ಯೆ: ಕಾಇ 45 ಎಲ್ಇಟಿ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 08.02.2019

ಇವರಿಂದ:
ಸರ್ಕಾರದ ಕಾರ್ಯದರ್ಶಿಗಳು,
ಕಾರ್ಮಿಕ ಇಲಾಖೆ,
ವಿಕಾಸಸೌಧ, ಬೆಂಗಳೂರು.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಸುಕುಮಾರ್ ಶೆಟ್ಟಿ ಬಿ.ಎಂ. (ಬೈಂದೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 377ಕ್ಕೆ ಉತ್ತರಿಸುವ ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಸುಕುಮಾರ್ ಶೆಟ್ಟಿ ಬಿ.ಎಂ. (ಬೈಂದೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 377ಕ್ಕೆ ಉತ್ತರಿಸುವ ಕುರಿತು ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ಜಿ.ಎಂ. ಸಿದ್ಧರಾಜು)
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

**ಪ್ರತಿಯನ್ನು ಮಾಹಿತಿಗಾಗಿ:**

1. ಮಾನ್ಯ ಕಾರ್ಮಿಕ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು
3. ಸರ್ಕಾರದ ಉಪ ಕಾರ್ಯದರ್ಶಿ ರವರ ಆಪ್ತ ಶಾಖೆ, ಕಾರ್ಮಿಕ ಇಲಾಖೆ, ವಿಕಾಸ ಸೌಧ.
4. ಸರ್ಕಾರದ ಉಪ ಕಾರ್ಯದರ್ಶಿರವರ ಆಪ್ತ ಸಹಾಯಕರು,(ಸಮನ್ವಯ) ಕಾರ್ಮಿಕ ಇಲಾಖೆ,
5. ಪೀಠಾಧಿಕಾರಿ-7, ಸ್ವೀಮರ ಶಾಖೆ, ಕಾರ್ಮಿಕ ಇಲಾಖೆ, ವಿಕಾಸ ಸೌಧ.

# ಕರ್ನಾಟಕ ವಿಧಾನ ಸಭೆ

| | | |
|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 377 |
| 2. | ಮಾನ್ಯ ಸದಸ್ಯರ ಹೆಸರು | ಶ್ರೀ ಸುಕುಮಾರ್ ಶೆಟ್ಟಿ ಬಿ.ಎಂ. (ಬೈಂದೂರು) |
| 3. | ಉತ್ತರಿಸಬೇಕಾದ ದಿನಾಂಕ | 11/02/2019 |
| 4. | ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಯಾವ ಯಾವ ಉದ್ಯಮದವರು ಕಾರ್ಮಿಕ ಇಲಾಖೆಗೆ ಒಳಪಡುತ್ತಾರೆ; ಕಾರ್ಮಿಕರಿಗೆ ಸರ್ಕಾರವು ನಿಗದಿಪಡಿಸಿರುವ ಯೋಜನೆಗಳು ಯಾವುವು; | ಸಂಘಟಿತ ಮತ್ತು ಅಸಂಘಟಿತ ವಲಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಉದ್ಯಮಗಳು ಕಾರ್ಮಿಕ ಇಲಾಖೆಯ ವ್ಯಾಪ್ತಿಗೆ ಒಳಪಡುತ್ತವೆ. ಈ ವಲಯದಲ್ಲಿ ಕೆಲಸ ಮಾಡುತ್ತಿರುವ ಕಾರ್ಮಿಕರಿಗೆ ಸಂಬಂಧಿಸಿದಂತೆ 85 ಉದ್ದಿಮೆಗಳನ್ನು ಕರ್ನಾಟಕ ಸರ್ಕಾರವು ಕನಿಷ್ಠ ವೇತನ ಕಾಯ್ದೆ, 1948ರ ಅನುಸೂಚಿಗೆ ಸೇರ್ಪಡೆಗೊಳಿಸಿದ್ದು, ಈ ಪೈಕಿ 82 ಅನುಸೂಚಿತ ಉದ್ದಿಮೆಗಳಿಗೆ ಕನಿಷ್ಠ ವೇತನ ದರಗಳನ್ನು ನಿಗದಿಪಡಿಸಿ, ಕಾಲ ಕಾಲಕ್ಕೆ ಪರಿಷ್ಕರಿಸಲಾಗುತ್ತಿದೆ. ಸರ್ಕಾರವು ಹೊರಡಿಸಿದ **ಅಧಿಸೂಚನೆ ಸಂಖ್ಯೆ: ಕಾಇ 47 ಎಲ್‌ಎಂಡಬ್ಲ್ಯೂ 2017, ದಿನಾಂಕ: 10-08-2018** ರನ್ವಯ, ಸದರಿ ಅನುಸೂಚಿತ ಉದ್ದಿಮೆಗಳ ಶೀರ್ಷಿಕೆಯನ್ನು ತಿದ್ದುಪಡಿಗೊಳಿಸಿ ವ್ಯಾಪ್ತಿಯನ್ನು ವಿಸ್ತರಿಸಿರುತ್ತದೆ. ಇದರ ವಿವರವನ್ನು **ಅನುಬಂಧ-1**ರಲ್ಲಿ ಒದಗಿಸಿದೆ.<br>ರಾಜ್ಯ ಸರ್ಕಾರವು ಹೊರಡಿಸಿದ **ಅಧಿಸೂಚನೆ ಸಂಖ್ಯೆ: ಕಾಇ 47 ಎಲ್‌ಎಂಡಬ್ಲ್ಯೂ 2017 ದಿನಾಂಕ: 30-07-2018**ರ ಅಧಿಸೂಚನೆಯನ್ವಯ, ಕಾಯ್ದೆಯ ಅನುಸೂಚಿಯ ಭಾಗ-1ಕ್ಕೆ ಇಪ್ಪತ್ತೊಂದು (21) ಹಾಗೂ ಭಾಗ-2 ಕ್ಕೆ ಒಂದು (1) ಉದ್ದಿಮೆಯನ್ನು ಹೊಸದಾಗಿ ಸೇರ್ಪಡೆಗೊಳಿಸಿರುತ್ತದೆ. ವಿವರವನ್ನು **ಅನುಬಂಧ-2**ರಲ್ಲಿ ಒದಗಿಸಿದೆ.<br><br>ಕಾರ್ಮಿಕ ಇಲಾಖೆ ಅಧೀನದಲ್ಲಿ ಬರುವ ಈ ಕೆಳಕಂಡ ಮಂಡಳಿಗಳ ಮೂಲಕ ಕಾರ್ಮಿಕರಿಗೆ ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಯೋಜನೆಗಳನ್ನು ಜಾರಿಗೊಳಿಸುತ್ತಿದ್ದು, ವಿವರ ಕೆಳಕಂಡಂತಿರುತ್ತದೆ.<br><br>**I. ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ :-**<br>ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಯದಲ್ಲಿ ತೊಡಗಿರುವ ಕಾರ್ಮಿಕರನ್ನು ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ಫಲಾನುಭವಿಗಳಾಗಿ ನೋಂದಣಿ ಮಾಡಿಕೊಳ್ಳಲಾಗುತ್ತಿದ್ದು, ನೋಂದಾಯಿತ ಕಟ್ಟಡ |

ಕಾರ್ಮಿಕರಿಗೆ 15 ರೀತಿಯ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ನೀಡಲಾಗುತ್ತಿದ್ದು, ವಿವರವನ್ನು **ಅನುಬಂಧ-3** ರಲ್ಲಿ ಒದಗಿಸಿದೆ.

**II.ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:-**

ಕಾರ್ಮಿಕ ಇಲಾಖೆಯ ಅಧೀನದಲ್ಲಿ ಬರುವ ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಅಸಂಘಟಿತ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಒದಗಿಸುವ ಈ ಕೆಳಕಂಡ ಯೋಜನೆಗಳನ್ನು ಜಾರಿಗೊಳಿಸುತ್ತಿದೆ.

1. **ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-** ಈ ಯೋಜನೆಯಡಿ ಅಸಂಘಟಿತ ವಲಯದ ಕಾರ್ಮಿಕರೆಂದು ಗುರುತಿಸಲ್ಪಟ್ಟ ಖಾಸಗಿ ವಾಣಿಜ್ಯ ಸಾರಿಗೆ ವಾಹನ ಕಾರ್ಮಿಕರಾದ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳಿಗೆ ಅಪಘಾತ ಪರಿಹಾರ ಸೌಲಭ್ಯ ಒದಗಿಸಲಾಗುತ್ತಿದ್ದು, ಈ ಯೋಜನೆಯಡಿ ದೊರಕುವ ಸೌಲಭ್ಯಗಳು ಈ ಕೆಳಗಿನಂತಿವೆ.

   - ಅಪಘಾತದಿಂದ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳು ಮರಣ ಹೊಂದಿದ್ದಲ್ಲಿ, ಅವರ ನಾಮನಿರ್ದೇಶಿತರಿಗೆ ರೂ.5 ಲಕ್ಷ ಪರಿಹಾರ.
   - ಅಪಘಾತದಿಂದ ಶಾಶ್ವತ ದುರ್ಬಲತೆ ಹೊಂದಿದಾಗ, ಫಲಾನುಭವಿಗೆ ದುರ್ಬಲತೆಯ ಪ್ರಮಾಣಕ್ಕನುಗುಣವಾಗಿ ರೂ.2 ಲಕ್ಷದ ವರೆಗೆ ಪರಿಹಾರ.
   - ಅಪಘಾತದಿಂದ ತಾತ್ಕಾಲಿಕ ದುರ್ಬಲತೆ ಹೊಂದಿದಾಗ, ಫಲಾನುಭವಿಗೆ ಗರಿಷ್ಠ 1 ಲಕ್ಷ ರೂ.ಗಳ ವರೆಗೆ ಆಸ್ಪತ್ರೆ ವೆಚ್ಚದ ಮರುಪಾವತಿ.
   - ಈ ವರ್ಷದಿಂದ ಯೋಜನೆಯಡಿ ಅಪಘಾತದಿಂದ ನಿಧನರಾದ ಅಥವಾ ಸಂಪೂರ್ಣ ದುರ್ಬಲತೆ ಹೊಂದಿದ ಫಲಾನುಭವಿಗಳ ಇಬ್ಬರು ಮಕ್ಕಳಿಗೆ ಪದವಿಪೂರ್ವ ವ್ಯಾಸಂಗದವರೆಗೆ 10,000/- ರೂ.ಗಳ ವಾರ್ಷಿಕ ಶೈಕ್ಷಣಿಕ ಸಹಾಯಧನ ನೀಡಲಾಗುವುದು.
   - ಯೋಜನೆಯಡಿ ಊರ್ಜಿತ ಖಾಸಗಿ ವಾಣಿಜ್ಯ ವಾಹನ ಚಾಲನಾ ಪರವಾನಗಿ ಹೊಂದಿದ ಒಟ್ಟು 7,78,485 ಚಾಲಕರನ್ನು ಯೋಜನೆಯ ವ್ಯಾಪ್ತಿಗೆ ತರಲಾಗಿದೆ.

| | | |
|---|---|---|
| | | • ಈವರೆಗೆ ಸದರಿ ಯೋಜನೆಯಡಿ 482 ಅಪಘಾತ ಪ್ರಕರಣಗಳಲ್ಲಿ ರೂ.8,85,24,913/- ಗಳ ಅಪಘಾತ ಪರಿಹಾರವನ್ನು ಪಾವತಿಸಲಾಗಿದೆ.<br>• ಎಲ್ಲಾ ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಾಲಕರಿಗೆ ಸ್ಮಾರ್ಟ್ ಕಾರ್ಡ್ ನೀಡಲು ಕ್ರಮ ಕೈಗೊಂಡಿದೆ.<br>• ಸುರಕ್ಷತಾ ಚಾಲನೆಯನ್ನು ಉತ್ತೇಜಿಸುವ ಉದ್ದೇಶದಿಂದ, ಉತ್ತಮ ಹಾಗೂ ಸುರಕ್ಷತಾ ಚಾಲನೆ ಮಾಡಿದ ಚಾಲಕರನ್ನು ಗುರುತಿಸಿ ಮಾರ್ಚ್-01 ರಂದು ನಡೆಯುವ "ಕಾರ್ಮಿಕ ಸಮ್ಮಾನ ದಿನಾಚರಣೆ"ಯ ಸಂದರ್ಭದಲ್ಲಿ "ಶ್ರಮ ಸಮ್ಮಾನ ಪ್ರಶಸ್ತಿ" ಹಾಗೂ "ವಿಶೇಷ ಪುರಸ್ಕಾರ"ಗಳನ್ನು ನೀಡಲು ಕ್ರಮಕೈಗೊಂಡಿದೆ.<br><br>2. **ಅಪಘಾತ ಜೀವ ರಕ್ಷಕ ಯೋಜನೆ:- ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆಯ** ವ್ಯಾಪ್ತಿಯ ಅಡಿಗೆ ಬರುವ ಈ ಯೋಜನೆಯಡಿ, ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಾಲಕರಿಗೆ ಪ್ರಥಮ ಚಿಕಿತ್ಸಾ ತರಬೇತಿ ನೀಡಿ, ಅಪಘಾತದ ಗಾಯಾಳುಗಳನ್ನು ರಕ್ಷಿಸುವ "ಅಪಘಾತ ಜೀವ ರಕ್ಷಕ" ಸ್ವಯಂಸೇವಕರನ್ನು ಸಜ್ಜುಗೊಳಿಸುವ ಉದ್ದೇಶ ಹೊಂದಿದ್ದು, ಇದನ್ನು 2016-17ನೇ ಸಾಲಿನಿಂದ ಜಾರಿಗೊಳಿಸುತ್ತಿದೆ.<br>• ಈ ಯೋಜನೆಯಡಿ ಖಾಸಗಿ ವಾಣಿಜ್ಯ ವಾಹನ ಚಾಲಕರಿಗೆ ಮೆ॥ ಭಾರತೀಯ ರೆಡ್ ಕ್ರಾಸ್ ಸೊಸೈಟಿಯ ಮೂಲಕ ಪ್ರಥಮ ಚಿಕಿತ್ಸಾ ತರಬೇತಿ ನೀಡಲಾಗುತ್ತಿದೆ.<br>• ಈ ಯೋಜನೆಯಡಿ 2016-17ನೇ ಸಾಲಿನಲ್ಲಿ 2701, 2017-18ನೇ ಸಾಲಿನಲ್ಲಿ 12,176 ಚಾಲಕರಿಗೆ ಪ್ರಥಮ ಚಿಕಿತ್ಸಾ ತರಬೇತಿ ನೀಡಲಾಗಿದೆ. 2018-19ನೇ ಸಾಲಿನಲ್ಲಿ 25,000 ಚಾಲಕರಿಗೆ ಪ್ರಥಮ ಚಿಕಿತ್ಸಾ ತರಬೇತಿ ನೀಡಲು ಗುರಿ ನಿಗದಿಪಡಿಸಿದೆ.<br>• ತರಬೇತಿಯ ಶಿಬಿರಾರ್ಥಿಗಳನ್ನು ಉತ್ತೇಜಿಸಲು ಪ್ರತಿ ಶಿಬಿರಾರ್ಥಿಗೆ ದಿನಭತ್ಯೆ ರೂ.350/-ಗಳನ್ನು ಪಾವತಿಸಲಾಗುತ್ತಿದೆ.<br>• ತರಬೇತಿ ಪಡೆದ ಎಲ್ಲಾ ಚಾಲಕರಿಗೆ ತರಬೇತಿಯ ಅಂತ್ಯಕ್ಕೆ ಪ್ರಮಾಣಪತ್ರಗಳನ್ನು ಸ್ಥಳದಲ್ಲಿಯೇ ವಿತರಿಸಲಾಗುತ್ತಿದೆ. |

| | | |
|---|---|---|
| | | • ಅಪಘಾತದ ಗಾಯಾಳುವಿಗೆ ತಕ್ಷಣ ಅಗತ್ಯವಿರುವ ಪ್ರಥಮ ಚಿಕಿತ್ಸೆ ನೀಡಲು, ತರಬೇತಿ ಪಡೆದ ಫಲಾನುಭವಿಗಳಿಗೆ ಸುಸಜ್ಜಿತ ಪ್ರಥಮ ಚಿಕಿತ್ಸಾ ಕಿಟ್ ನೀಡಲಾಗುತ್ತಿದೆ.<br>• ಅಪಘಾತಕ್ಕೊಳಗಾದ ಗಾಯಾಳುವಿಗೆ ಪ್ರಥಮ ಚಿಕಿತ್ಸೆ ನೀಡಿ, ಹತ್ತಿರದ ಆಸ್ಪತ್ರೆಗೆ ಸೇರಿಸಿ, ಅಪಘಾತದ ಬಗ್ಗೆ ಹತ್ತಿರದ ಪೋಲೀಸ್ ಠಾಣೆಗೆ ಮಾಹಿತಿ ನೀಡಿದ ಜೀವ ರಕ್ಷಕರಿಗೆ ರೂ.1000/- ಪ್ರೋತ್ಸಾಹಧನ ನೀಡಲಾಗುವುದು.<br><br>3. **ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-** 2017-18ನೇ ಸಾಲಿನ ಆಯವ್ಯದಲ್ಲಿ ಘೋಷಿಸಿದಂತೆ ಮಂಡಳಿಯು 5 ವರ್ಗಗಳ ಅಸಂಘಟಿತ ಕಾರ್ಮಿಕರಾದ ಹಮಾಲಿಗಳು, ಗೃಹಕಾರ್ಮಿಕರು, ಟೈಲರ್, ಚಿಂದಿ ಆಯುವವರು ಹಾಗೂ ಮೆಕ್ಯಾನಿಕ್ ವರ್ಗಗಳ ಕಾರ್ಮಿಕರನ್ನು "ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ"ಯಡಿ ನೋಂದಾಯಿಸಿ ಸ್ಮಾರ್ಟ್‌ಕಾರ್ಡ್ ನೀಡಲಾಗುತ್ತಿದೆ.<br><br>2018-19ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿದಂತೆ, ಆರು ವರ್ಗಗಳ ಅಸಂಘಟಿತ ಕಾರ್ಮಿಕರಾದ ಅಗಸರು, ಕ್ಷೌರಿಕರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಹಾಗೂ ಭಟ್ಟಿ ಕಾರ್ಮಿಕರನ್ನೂ ಸಹ ಈ ಯೋಜನೆಯಡಿ ನೋಂದಾಯಿಸಿ ಸ್ಮಾರ್ಟ್‌ಕಾರ್ಡ್ ನೀಡಲು ಕ್ರಮ ಕೈಗೊಳ್ಳಲಾಗುತ್ತಿದೆ.<br><br>11 ವಲಯಗಳ ಅಸಂಘಟಿತ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಒದಗಿಸುವ ದೃಷ್ಠಿಯಿಂದ ವಂತಿಕೆ ಆಧಾರಿತ ಭವಿಷ್ಯನಿಧಿ ಸೌಲಭ್ಯವನ್ನು ಒದಗಿಸಲು ಉದ್ದೇಶಿಸಲಾಗಿದೆ.<br><br>ಈವರೆಗೆ 49,334 ಭರ್ತಿ ಮಾಡಿದ ಅರ್ಜಿಗಳನ್ನು ಮಂಡಳಿ ವತಿಯಿಂದ ಸ್ವೀಕರಿಸಿದ್ದು, ಸ್ಮಾರ್ಟ್ ಕಾರ್ಡ್ ಮುದ್ರಣ ಕಾರ್ಯ ಪ್ರಗತಿಯಲ್ಲಿದೆ.<br><br>ಅಸಂಘಟಿತ ವಲಯಗಳಲ್ಲಿ ದುಡಿಯುತ್ತಿರುವ ಕಾರ್ಮಿಕರ ಸೇವೆಯನ್ನು ಗುರುತಿಸಿ ಆಯ್ದ 11 ವರ್ಗಗಳ ಅಸಂಘಟಿತ ಕಾರ್ಮಿಕರಿಗೆ ಮಾರ್ಚ್-01 ರಂದು ನಡೆಯುವ **"ಕಾರ್ಮಿಕ ಸಮ್ಮಾನ ದಿನಾಚರಣೆ"**ಯ ಸಂದರ್ಭದಲ್ಲಿ **"ಶ್ರಮ ಸಮ್ಮಾನ ಪ್ರಶಸ್ತಿ"** ಹಾಗೂ **"ವಿಶೇಷ ಪುರಸ್ಕಾರ"**ಗಳನ್ನು ನೀಡಲು ಕ್ರಮಕೈಗೊಂಡಿದೆ. |

| | | |
|---|---|---|
| | | ಶ್ರಮ ಸಮ್ಮಾನ ಪ್ರಶಸ್ತಿಯನ್ನು ಪ್ರತಿ ಜಿಲ್ಲೆಗೆ ಪ್ರತಿ ವರ್ಗಕ್ಕೆ ತಲಾ 1 ರಂತೆ ಒಟ್ಟು 330 ಕಾರ್ಮಿಕರಿಗೆ ಹಾಗೂ ವಿಶೇಷ ಪುರಸ್ಕಾರವನ್ನು ಪ್ರತಿ ಜಿಲ್ಲೆಗೆ ಪ್ರತಿ ವರ್ಗಕ್ಕೆ ತಲಾ 10 ರಂತೆ ಒಟ್ಟು 3300 ಕಾರ್ಮಿಕರಿಗೆ ನೀಡಲು ಕ್ರಮಕೈಗೊಂಡಿದೆ.<br>ಶ್ರಮ ಸಮ್ಮಾನ ಪ್ರಶಸ್ತಿಯು ರೂ.10000/-ಗಳ ನಗದು ಮೌಲ್ಯ, ಸ್ಮರಣಿಕೆ ಹಾಗೂ ಪ್ರಶಂಸಾ ಪತ್ರ ಒಳಗೊಂಡಿರುತ್ತದೆ.<br>ವಿಶೇಷ ಪುರಸ್ಕಾರವು ರೂ.1000/-ಗಳ ನಗದು ಮೌಲ್ಯ, ಸ್ಮರಣಿಕೆ ಹಾಗೂ ಪ್ರಶಂಸಾ ಪತ್ರ ಒಳಗೊಂಡಿರುತ್ತದೆ.<br>**III. ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:-**<br>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ ವ್ಯಾಪ್ತಿಗೆ ಕಾರ್ಖಾನೆ/ಕೈಗಾರಿಕೆಗಳು, ಪ್ಲಾಂಟೇಷನ್, ಮೋಟಾರ್ ವಾಹನ ಸಾರಿಗೆ ಸಂಸ್ಥೆಗಳು ಹಾಗೂ 50 ಮತ್ತು ಅದಕ್ಕಿಂತ ಹೆಚ್ಚು ಕಾರ್ಮಿಕರನ್ನೊಳಗೊಂಡ ಅಂಗಡಿ ಮತ್ತು ವಾಣಿಜ್ಯ ಸಂಸ್ಥೆಗಳು ಒಳಪಡುತ್ತವೆ. ಈ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದು, ಮಂಡಳಿಗೆ ವಂತಿಗೆ ಪಾವತಿಸುವ ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರಿಗೆ ಮಂಡಳಿಯ ವತಿಯಿಂದ ವಿವಿಧ ಕಲ್ಯಾಣ ಯೋಜನೆ ಹಾಗೂ ಆರ್ಥಿಕ ಸೌಲಭ್ಯಗಳನ್ನು ನೀಡಲಾಗುತ್ತಿದೆ. ಯೋಜನೆಗಳ ವಿವರಗಳನ್ನು **ಅನುಬಂಧ-4** ರಲ್ಲಿ ಒದಗಿಸಿದೆ. |
| ಆ) | ಬೈಂದೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ನೋಂದಾಯಿಸದೇ ಇರುವ ಕಾರ್ಮಿಕರ ಸಂಖ್ಯೆ ಎಷ್ಟು; ಅಂತಹವರನ್ನು ಯಾವ ರೀತಿ ನೊಂದಾಯಿಸಿಕೊಳ್ಳಲಾಗುವುದು; ಅಲ್ಲಿಯವರೆಗೆ ಅವರಿಗೆ ಸಿಗುವ ಸೌಲಭ್ಯಗಳು ಯಾವುವು; (ವಿವರ ಒದಗಿಸುವುದು) | ಬೈಂದೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ನೋಂದಾಯಿಸದೇ ಇರುವ ಕಾರ್ಮಿಕರ ಬಗ್ಗೆ ಇಲಾಖೆಯಿಂದ ಯಾವುದೇ ಸಮೀಕ್ಷೆ / ಗಣತಿ ಕಾರ್ಯವನ್ನು ಕೈಗೊಳ್ಳದ ಕಾರಣ, ನೋಂದಾಯಿಸದೇ ಇರುವ ಕಾರ್ಮಿಕರ ಬಗ್ಗೆ ಮಾಹಿತಿ ಲಭ್ಯವಿರುವುದಿಲ್ಲ.<br>✓ **ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ** ವತಿಯಿಂದ ಕಟ್ಟಡ ಕಾರ್ಮಿಕರನ್ನು ಫಲಾನುಭವಿಗಳಾಗಿ ನೋಂದಾಯಿಸಲು ಕಿಯೋನಿಕ್ಸ್ ಸಂಸ್ಥೆ ಮುಖೇನ ವಿಶೇಷ ನೋಂದಣಿ ಅಭಿಯಾನವನ್ನು ಕೈಗೊಂಡು ಅರ್ಹ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರನ್ನು ಮಂಡಳಿಯ ಫಲಾಭವಿಗಳನ್ನಾಗಿ ನೋಂದಣಿ ಮಾಡಿಕೊಳ್ಳಲಾಗುತ್ತಿದೆ. ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ (ಉದ್ಯೋಗದ ಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಕಾಯ್ದೆ 1996 ರನ್ವಯ |

| | | |
|---|---|---|
| | | ಮಂಡಳಿಯಲ್ಲಿ ಫಲಾನುಭವಿಯಾಗಿ ನೋಂದಣಿಯಾಗದೇ ಇರುವ ಕಾರ್ಮಿಕರಿಗೆ ಯಾವುದೇ ಸೌಲಭ್ಯಗಳು ಪ್ರಸ್ತುತ ಲಭ್ಯವಿರುವುದಿಲ್ಲ.<br>✓ **ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ** ವತಿಯಿಂದ ಅಸಂಘಟಿತ ವಲಯದ ಕಾರ್ಮಿಕರಾದ ಹಮಾಲಿಗಳು, ಗೃಹಕಾರ್ಮಿಕರು, ಟೈಲರ್, ಚಿಂದಿ ಆಯುವವರು, ಮೆಕ್ಯಾನಿಕ್‌ಗಳು, ಅಗಸರು, ಕ್ಷೌರಿಕರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಹಾಗೂ ಭಟ್ಟಿ ಕಾರ್ಮಿಕರಲ್ಲಿ ನೋಂದಣಿಯಾಗದೆ ಇರುವ ಕಾರ್ಮಿಕರನ್ನು ನೋಂದಾಯಿಸಲು ಇಲಾಖೆಯ ಕಾರ್ಮಿಕ ನಿರೀಕ್ಷಕರು ಹಾಗೂ ಕಾರ್ಮಿಕ ಬಂಧುಗಳು ಆಯಾ ವರ್ಗದ ಸಂಘ ಸಂಸ್ಥೆಗಳನ್ನು ಸಂಪರ್ಕಿಸಿ, ಜಿಲ್ಲಾ ಕಾರ್ಮಿಕ ಅಧಿಕಾರಿಗಳಿಂದ ಕಾರ್ಮಿಕರನ್ನು ನೋಂದಾಯಿಸಲು ಕ್ರಮ ಕೈಗೊಳ್ಳಲಾಗಿದೆ. ಮಂಡಳಿಯಲ್ಲಿ ಫಲಾನುಭವಿಯಾಗಿ ನೋಂದಣಿಯಾಗದೇ ಇರುವ ಕಾರ್ಮಿಕರಿಗೆ ಯಾವುದೇ ಸೌಲಭ್ಯಗಳು ಪ್ರಸ್ತುತ ಲಭ್ಯವಿರುವುದಿಲ್ಲ. |
| ಇ) | ರಾಜ್ಯದಲ್ಲಿ ಕೃಷಿ ಚಟುವಟಿಕೆಗಳಲ್ಲಿ ತೊಡಗಿರುವ ಕೃಷಿ ಕೂಲಿ ಕಾರ್ಮಿಕರನ್ನು ಕಾರ್ಮಿಕ ಇಲಾಖಾ ವ್ಯಾಪ್ತಿಗೆ ಒಳಪಡಿಸಿ ಅವರಿಗೆ ಜೀವನ ಭದ್ರತೆ ಒದಗಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ✓ ಕೃಷಿ ಕೂಲಿ ಕಾರ್ಮಿಕರಿಗೆ ಸಂಬಂಧಿಸಿದಂತೆ ಕನಿಷ್ಠ ವೇತನ ಕಾಯ್ದೆ, 1948 ರ ಅನುಸಾರ 'ಬೇಸಾಯ ಮತ್ತು ಸಂಬಂಧಿತ ಕೆಲಸಗಳಲ್ಲ ಉದ್ಯೋಗ' ಎಂಬ ಶೀರ್ಷಿಕೆಯಡಿ ಅನುಸೂಚಿಗೆ ಸೇರಿಸಿ ಕನಿಷ್ಠ ವೇತನವನ್ನು ನಿಗಧಿಪಡಿಸಿ ಕಾಲಕಾಲಕ್ಕೆ ಪರಿಷ್ಕರಿಸುವುದರ ಮೂಲಕ ಕೃಷಿ ಕೂಲಿ ಕಾರ್ಮಿಕರಿಗೆ ವೇತನ ಭದ್ರತೆಯನ್ನು ಒದಗಿಸಲಾಗಿದೆ.<br>✓ ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯಿಂದ ಕೃಷಿ ಕಾರ್ಮಿಕರನ್ನು ಅಸಂಘಟಿತ ಕಾರ್ಮಿಕರೆಂದು ಈಗಾಗಲೇ ಗುರುತಿಸಿ ಅಧಿಸೂಚನೆ ಹೊರಡಿಸಲಾಗಿದೆ. ಪ್ರಸ್ತುತ ಕೃಷಿ ಕಾರ್ಮಿಕರಿಗಾಗಿ ಯಾವುದೇ ಯೋಜನೆಗಳು ಜಾರಿಯಲ್ಲಿರುವುದಿಲ್ಲ. |
| ಈ) | ಈ ಬಗ್ಗೆ ಸರ್ಕಾರ ತೆಗೆದುಕೊಳ್ಳಲಿರುವ ಕ್ರಮವೇನು? (ವಿವರ ಒದಗಿಸುವುದು) | |

**ಕಾಇ 45 ಎಲ್‌ಇಟಿ 2019**

(ವೆಂಕಟರಮಣಪ್ಪ)
ಕಾರ್ಮಿಕ ಸಚಿವರು

**ಕರ್ನಾಟಕ ಸರ್ಕಾರ**

ಸಂಖ್ಯೆ: ಆರ್‌ಡಿ 10 ಎಲ್‌ಜಿಕ್ಯೂ 2019

ಕರ್ನಾಟಕ ಸರ್ಕಾರ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 8/2/2019

**ಇವರಿಂದ:**

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಕಂದಾಯ ಇಲಾಖೆ,
**ಬೆಂಗಳೂರು.**

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

ವಿಷಯ: ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ಅರವಿಂದ ಲಿಂಬಾವಳಿ ರವರು ಮಂಡಿಸಿರುವ ಚುಕ್ಕೆ ಗುರುತು/ಗುರುತಿಲ್ಲದ ಪ್ರಶ್ನೆ ಸಂಖ್ಯೆ: 293 ಕ್ಕೆ ಉತ್ತರ ಒದಗಿಸುವ ಬಗ್ಗೆ.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆ ಸದಸ್ಯರಾದ ಅರವಿಂದ ಲಿಂಬಾವಳಿ ಇವರು ಮಂಡಿಸಿರುವ ಚುಕ್ಕೆ ಗುರುತು/ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 293 ಕ್ಕೆ ಸಂಬಂಧಿಸಿದಂತೆ ಉತ್ತರದ 30 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ ಎಂದು ತಿಳಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

**(ಎಸ್.ಎಲ್.ಮಹಾಂತೇಗೌಡ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ ಭೂಮಂಜೂರಾತಿ-1

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 293
ಸದಸ್ಯರ ಹೆಸರು : ಶ್ರೀ ಅರವಿಂದ ಲಿಂಬಾವಳಿ (ಮಹದೇವಪುರ)
ಉತ್ತರಿಸುವ ದಿನಾಂಕ : 11-02-2019
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಪೂರ್ವ ತಾಲ್ಲೂಕು ವ್ಯಾಪ್ತಿಯಲ್ಲಿ ಇರುವ ಒಟ್ಟು ಸರ್ಕಾರಿ ಜಮೀನು ಎಷ್ಟು; (ವಿವರ ನೀಡುವುದು) | ಒಟ್ಟು 16227-00.12 ಎಕರೆ/ಗುಂಟೆ ಸರ್ಕಾರಿ ಜಮೀನು ಇರುತ್ತದೆ. |
| ಆ) | ಈ ಪೈಕಿ ಸರ್ಕಾರಿ ಜಮೀನು ಒತ್ತುವರಿಯಾಗಿರುವ ಪ್ರಕರಣಗಳು ಎಷ್ಟು; (ವಿವರ ನೀಡುವುದು) | ಮಾನ್ಯ ಎ.ಟಿ.ರಾಮಸ್ವಾಮಿ ಆಯೋಗದ ವರದಿಯಂತೆ ಒತ್ತುವರಿ ಮಾಡಿಕೊಂಡಿರುವವರ ಸಂಖ್ಯೆ: 4762 ಮತ್ತು ಒತ್ತುವರಿ ವಿಸ್ತೀರ್ಣ 2204-26.02 ಎಕರೆ/ಗುಂಟೆ. |
| ಇ) | ಸದರಿ ಪ್ರಕರಣಗಳಲ್ಲಿ ಎಷ್ಟು ಸರ್ಕಾರಿ ಜಮೀನಿನ ಒತ್ತುವರಿಯನ್ನು ತೆರವುಗೊಳಿಸಲಾಗಿದೆ; ಅವು ಯಾವುವು; ಅವುಗಳನ್ನು ಸಂರಕ್ಷಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಒಟ್ಟು 1790-08.05 ಎಕರೆ/ಗುಂಟೆ ಜಮೀನನ್ನು ಒತ್ತುವರಿಯಿಂದ ತೆರವುಗೊಳಿಸಲಾಗಿದೆ.<br><br>ತೆರವುಗೊಳಿಸಲಾದ ಸರ್ಕಾರಿ ಜಮೀನುಗಳಿಗೆ ತಂತಿಬೇಲಿಯನ್ನು ನಿರ್ಮಿಸಿ ಸರ್ಕಾರದ ವಶಕ್ಕೆ ಪಡೆದಿರುವ ಬಗ್ಗೆ ನಾಮಫಲಕವನ್ನು ಅಳವಡಿಸಿ ಸಂರಕ್ಷಿಸಲಾಗಿರುತ್ತದೆ. |
| ಈ) | ಉಳಿದ ಒತ್ತುವರಿ ಜಮೀನನ್ನು ತೆರವುಗೊಳಿಸಲು ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಸರ್ಕಾರಿ ಜಮೀನುಗಳಲ್ಲಿನ ಒತ್ತುವರಿಯನ್ನು ತೆರವುಗೊಳಿಸಲು ನಿಯಮಾನುಸಾರ ಕ್ರಮವಹಿಸಲಾಗುತ್ತಿದೆ.<br><br>ಮೇಲ್ಕಂಡಂತೆ ಎಲ್ಲಾ ವಿವರಗಳನ್ನು ಸಿ.ಡಿ.ರೂಪದಲ್ಲಿ ತಯಾರಿಸಿ ಇದರೊಂದಿಗೆ ಲಗತ್ತಿಸಿದೆ. |

**ಸಂಖ್ಯೆ: ಆರ್‌ಡಿ 10 ಎಲ್‌ಜಿಕ್ಯೂ 2019**

**(ಆರ್.ವಿ.ದೇಶಪಾಂಡೆ)**
**ಕಂದಾಯ ಸಚಿವರು**

**ಕರ್ನಾಟಕ ಸರ್ಕಾರ**

ಸಂಖ್ಯೆ:ಅಪಜೀ 50 ಇಪಿಸಿ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:08.02.2019.

ಇಂದ,

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು
(ಜೀವಿಪರಿಸ್ಥಿತಿ ಮತ್ತು ಪರಿಸರ),
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ,
ಬೆಂಗಳೂರು.

ಇವರಿಗೆ,

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ, ಬೆಂಗಳೂರು.

**ಮಾನ್ಯರೆ,**

ವಿಷಯ: ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಜ್ಯೋತಿ ಗಣೇಶ್ ಜಿ.ಬಿ. ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 735 ಕ್ಕೆ ಉತ್ತರ ನೀಡುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಇವರ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/3ಅ/ಪ್ರ.ಸಂ.735/2019 ದಿನಾಂಕ: 04.02.2019.

* * * * *

ಮೇಲ್ಕಂಡ ವಿಷಯ ಹಾಗೂ ಉಲ್ಲೇಖಿತ ಪತ್ರಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀಮತಿ ಜ್ಯೋತಿ ಗಣೇಶ್ ಜಿ.ಬಿ. ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 735 ಕ್ಕೆ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರ ಉತ್ತರದ 150 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ,

08/2/2019

(ಬಾಲಚಂದ್ರಪ್ಪ ಗೋ. ಹುಣಶಾಳ)
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ.

**ಪ್ರತಿಯನ್ನು ಮಾಹಿತಿಗಾಗಿ:**

1. ಮಾನ್ಯ ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಹಿರಿಯ ಆಪ್ತ ಕಾರ್ಯದರ್ಶಿಗಳು, ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
3. ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ (ಆಯ್ಕೆ ಶ್ರೇಣಿ) (ಜೀವಿಪರಿಸ್ಥಿತಿ ಮತ್ತು ಪರಿಸರ), ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
4. ಶಾಖಾಧಿಕಾರಿ, ಪತ್ರ ಸ್ವೀಕಾರ ಮತ್ತು ಸಮನ್ವಯ ಶಾಖೆ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ (ಪರಿಸರ), ಬಹುಮಹಡಿಗಳ ಕಟ್ಟಡ, ಬೆಂಗಳೂರು.
5. ಶಾಖಾ ರಕ್ಷಾ ಕಡತ / ಹೆಚ್ಚುವರಿ ಪ್ರತಿಗಳು

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 735
2. ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ಜ್ಯೋತಿ ಗಣೇಶ್ ಜಿ.ಬಿ.
3. ಉತ್ತರಿಸಬೇಕಾದ ದಿನಾಂಕ : 11.02.2019
4. ಉತ್ತರಿಸಬೇಕಾದ ಸಚಿವರು : ಮಾನ್ಯ ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು.

| ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ತುಮಕೂರು ನಗರ ಪರಿಸರ ಮಾಲಿನ್ಯದಲ್ಲಿ ಮೊದಲ ಸ್ಥಾನದಲ್ಲಿರುವ ಕುರಿತು ಗ್ರೀನ್ ಪೀಸ್ ಎನ್ನುವ ಖಾಸಗಿ ಸಂಸ್ಥೆ ಕೇಂದ್ರ ಸರ್ಕಾರಕ್ಕೆ ವರದಿ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದಲ್ಲಿ, ಪರಿಸರ ಮಾಲಿನ್ಯ ತಡೆಯುವಲ್ಲಿ; ಪರಿಸರ ಕಾಪಾಡಲು ಸರ್ಕಾರ ಯಾವ ಯಾವ ಕ್ರಮಗಳನ್ನು ಕೈಗೊಂಡಿದೆ (ಮಾಹಿತಿ ನೀಡುವುದು)? | • ದಿನಾಂಕ 12.01.2017 ರಂದು ವಿವಿಧ ರಾಜ್ಯ ದಿನಪತ್ರಿಕೆಗಳಲ್ಲಿ ತುಮಕೂರು ನಗರದಲ್ಲಿ ವಾಯು ಗುಣಮಟ್ಟದ ಕುರಿತು ಪ್ರಕಟವಾದ ಸುದ್ದಿಯ ಸಂಬಂಧ ತುಮಕೂರು ನಗರ ಶಾಸಕರು ಮಾಲಿನ್ಯ ನಿಯಂತ್ರಣ ಮಂಡಳಿಯ ಪ್ರಾದೇಶಿಕ ಅಧಿಕಾರಿಗಳೊಂದಿಗೆ ಸಭೆ ನಡೆಸಿ ಮಾಲಿನ್ಯ ಉಂಟು ಮಾಡುತ್ತಿರುವ ಅಕ್ಕಿ ಗಿರಣಿಗಳು ಹಾಗೂ ಗ್ರಾನೈಟ್ ಕೈಗಾರಿಕೆಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಸೂಚಿಸಿರುತ್ತಾರೆ.<br>• ಈ ಸಂಬಂಧ ಅಂತರಸನಹಳ್ಳಿ ಕೈಗಾರಿಕಾ ಪ್ರದೇಶದಲ್ಲಿರುವ ಕೈಗಾರಿಕೆಗಳು, ಅಕ್ಕಿಗಿರಣಿ ಮಾಲೀಕರ ಸಂಘ ಹಾಗೂ ಜಿಲ್ಲಾ ಗ್ರಾನೈಟ್ ಕೈಗಾರಿಕೆಗಳ ಸಂಘದ ಅಧ್ಯಕ್ಷರುಗಳಿಗೆ ದಿನಾಂಕ 13.01.2017 ರಂದು ಪತ್ರ ಬರೆದು ಸೂಕ್ತ ಮಾಲಿನ್ಯ ನಿಯಂತ್ರಣ ಕ್ರಮಗಳನ್ನು ಅಳವಡಿಸಿಕೊಳ್ಳಲು ಸೂಚಿಸಲಾಗಿರುತ್ತದೆ.<br>• ದಿನಾಂಕ 13.01.2017 ರಂದು ಆಯುಕ್ತರು, ತುಮಕೂರು ಮಹಾನಗರ ಪಾಲಿಕೆ ಇವರಿಗೆ ಪತ್ರ ಬರೆದು ರಸ್ತೆಗಳ ಡಾಂಬರೀಕರಣ, ರಸ್ತೆ ಬದಿಯಲ್ಲಿ ಮರಗಳನ್ನು ಬೆಳೆಸುವುದು, ಕಟ್ಟಡ ಅವಶೇಷಗಳನ್ನು ಸೂಕ್ತ ರೀತಿಯಲ್ಲಿ ವಿಲೇವಾರಿ ಮಾಡುವುದು, ಘನ ತ್ಯಾಜ್ಯ ವಸ್ತುಗಳನ್ನು ಸುಡುವುದನ್ನು ನಿಷೇಧಿಸುವುದು ಹಾಗೂ ಸ್ವಚ್ಛತಾ ಕಾರ್ಯ ತೀವ್ರಗೊಳಿಸಲು ಸೂಚಿಸಲಾಗಿದೆ. |

- ಮಂಡಳಿಯ ತುಮಕೂರು ಪ್ರಾದೇಶಿಕ ಕಛೇರಿಯಿಂದ ದಿನಾಂಕ 20.01.2017 ರಂದು ಮಾನ್ಯ ಜಿಲ್ಲಾಧಿಕಾರಿಗಳು, ತುಮಕೂರು ಇವರಿಗೆ ಮಾಲಿನ್ಯ ನಿಯಂತ್ರಣ ಕ್ರಮಗಳ ಕುರಿತು ವರದಿ ಸಲ್ಲಿಸಲಾಗಿರುತ್ತದೆ.
- ದಿನಾಂಕ 21.02.2017 ಹಾಗೂ 22.07.2017 ರಂದು ಕೈಗಾರಿಕಾ ಸಂಘಗಳಿಗೆ ನೆನಪೋಲೆ ಬರೆದು ಮಾಲಿನ್ಯ ನಿಯಂತ್ರಣಕ್ಕೆ ತಾವು ಕೈಗೊಂಡ ಕ್ರಮಗಳ ಕುರಿತ ವರದಿಯನ್ನು ನೀಡುವಂತೆ ಸೂಚಿಸಲಾಗಿರುತ್ತದೆ.
- ತುಮಕೂರು ನಗರದ ಸುತ್ತಮುತ್ತ ಇರುವ ಅಕ್ಕಿಗಿರಣಿಗಳಿಂದ ಉಂಟಾಗುತ್ತಿದ್ದ ಧೂಳು/ವಾಯು ಮಾಲಿನ್ಯ ಕುರಿತಾಗಿ ಮಾನ್ಯ ಶಾಸಕರು, ತುಮಕೂರು ನಗರ, ಮಾನ್ಯ ಜಿಲ್ಲಾಧಿಕಾರಿಗಳು, ಮಂಡಳಿಯ ಅಧ್ಯಕ್ಷರು ಹಾಗೂ ಹಿರಿಯ ಪರಿಸರ ಅಧಿಕಾರಿಗಳ ಸಮ್ಮುಖದಲ್ಲಿ ಹಲವಾರು ಸಭೆ ನಡೆಸಿ ಮಾಲಿನ್ಯ ನಿಯಂತ್ರಣ ಕ್ರಮಗಳನ್ನು ಅಳವಡಿಸುವಂತೆ ಸೂಚಿಸಲಾಗಿರುತ್ತದೆ. ಮಾನ್ಯ ಉಪ ಲೋಕಾಯುಕ್ತರು ದಿನಾಂಕ 22.04.2017 ರಂದು ತುಮಕೂರಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಅಕ್ಕಿಗಿರಣಿಗಳ ಕುರಿತಾಗಿ ಸಾರ್ವಜನಿಕರಿಂದ ದಾಖಲಾದ ದೂರುಗಳ ಬಗ್ಗೆ ಮಾಹಿತಿ ಸಂಗ್ರಹಿಸಿರುತ್ತಾರೆ.
- ದಿನಾಂಕ 23.02.2018 ರಂದು ಮಾನ್ಯ ಉಪ ಲೋಕಾಯುಕ್ತರು ನಡೆಸಿದ ವಿಚಾರಣೆ ಸಂದರ್ಭದಲ್ಲಿ ನಗರ ಪ್ರದೇಶದಲ್ಲಿರುವ ಅಕ್ಕಿಗಿರಣಿಗಳನ್ನು ಸ್ಥಳಾಂತರಿಸುವಂತೆ ನಿರ್ದೇಶಿಸಿರುತ್ತಾರೆ.
- ಈ ಬಗ್ಗೆ ದಿನಾಂಕ 16.08.2018 ರಂದು ಮಂಡಳಿಯ ಅಧ್ಯಕ್ಷರ ಸಮ್ಮುಖದಲ್ಲಿ ಅಕ್ಕಿ ಗಿರಣಿ ಮಾಲೀಕರ ಸಂಘದ ಅಧ್ಯಕ್ಷರು ಹಾಗೂ ಪದಾಧಿಕಾರಿಗಳನ್ನು ಮೌಖಿಕ ವಿಚಾರಣೆಗೆ ಕರೆಯಲಾಗಿತ್ತು. ಸದರಿ ಸಭೆಯಲ್ಲಿ ಮಂಡಳಿಯ ಅಧ್ಯಕ್ಷರು ನಗರ ಪ್ರದೇಶದಲ್ಲಿರುವ (ಕೈಗಾರಿಕಾ ಪ್ರದೇಶ ಹೊರತುಪಡಿಸಿ) ಅಕ್ಕಿಗಿರಣಿಗಳನ್ನು 2 ವರ್ಷದೊಳಗಾಗಿ ಸ್ಥಳಾಂತರಿಸುವಂತೆ ಸೂಚಿಸಿರುತ್ತಾರೆ
- ಈ ಕಛೇರಿ ಅಧಿಕಾರಿಗಳಿಂದ ತುಮಕೂರು ನಗರದ ಸುತ್ತಮುತ್ತ ಇರುವ ಕೈಗಾರಿಕೆಗಳು ಹಾಗೂ ಅಕ್ಕಿ ಗಿರಣಿಗಳನ್ನು ಕಾಲಕಾಲಕ್ಕೆ ಪರಿಶೀಲಿಸಿ, ವಾಯು ಮಾದರಿ ಸಂಗ್ರಹಿಸಿ ಉಲ್ಲಂಘಿತ ಘಟಕಗಳ ವಿರುದ್ಧ ಕಾನೂನು ರೀತಿ ಕ್ರಮ ಜರುಗಿಸಲಾಗುತ್ತಿದೆ. ಅದರಂತೆ, ಜುಲೈ 2018 ರಿಂದ 9 ಅಕ್ಕಿಗಿರಣಿಗಳಿಗೆ ಮಂಡಳಿಯ ಕೇಂದ್ರ ಕಛೇರಿಯಿಂದ ವಾಯು (ಮಾಲಿನ್ಯ ತಡೆಗಟ್ಟುವಿಕೆ ಮತ್ತು ನಿಯಂತ್ರಣ) ಕಾಯ್ದೆ, 1981 ರ ಅಡಿಯಲ್ಲಿ ಮುಚ್ಚುವ ಆದೇಶ ನೀಡಲಾಗಿರುತ್ತದೆ.

| | | |
|---|---|---|
| | | ಹಾಗೂ ಮಾಲಿನ್ಯ ನಿಯಂತ್ರಣ ಕ್ರಮಗಳನ್ನು ಅಳವಡಿಸಿ, ಕ್ವಾರಿಕೆಯಿಂದ ಹರಡುತ್ತಿದ್ದ ಧೂಳನ್ನು ನಿಯಂತ್ರಿಸಿದ ಘಟಕಗಳಿಗೆ ಮಾತ್ರ ಮುಚ್ಚುವ ಆದೇಶವನ್ನು ತೆರವುಗೊಳಿಸುವಂತೆ ಕ್ರಮವನ್ನು ಮಾಡಲಾಗುತ್ತಿದೆ<br>ಕಳೆದ 4 ವರ್ಷಗಳಿಂದ ಈಚೆಗೆ ಅಕ್ಕಿ ಗಿರಣಿಗಳ ಕುರಿತಾಗಿ ದಾಖಲಾಗುತ್ತಿದ್ದ ದೂರುಗಳ ಸಂಖ್ಯೆ ಗಣನೀಯವಾಗಿ ಕಡಿಮೆಯಾಗಿರುತ್ತದೆ ಅಲ್ಲದೇ, ಮಂಡಳಿಯ ಪ್ರಾದೇಶಿಕ ಕಛೇರಿ, ತುಮಕೂರು ಇವರಿಂದ ಸಂಗ್ರಹಿಸಲಾಗುತ್ತಿರುವ ಪರಿವೇಷ್ಟಕ ಗಾಳಿಯ ಗುಣಮಟ್ಟದ ಧೂಳಿನ ಪ್ರಮಾಣವು ಕಡಿಮೆಯಾಗಿರುತ್ತದೆ. |

ಸಂಖ್ಯೆ: ಅಪಜೀ 30 ಇಪಿಸಿ 2019

(ಸತೀಶ್ ಜಾರಕಿಹೊಳಿ)
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಆರ್‌ಡಿ 13 ಎಲ್‌ಜಿಕ್ಯೂ 2019

ಕರ್ನಾಟಕ ಸರ್ಕಾರ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 8/2/19

**ಇವರಿಂದ:**

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಕಂದಾಯ ಇಲಾಖೆ,
**ಬೆಂಗಳೂರು.**

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

ವಿಷಯ: ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ಶಿವಣ್ಣ ಬಿ. ರವರು ಮಂಡಿಸಿರುವ ಚುಕ್ಕೆ ಗುರುತು/ಗುರುತಿಲ್ಲದ ಪ್ರಶ್ನೆ ಸಂಖ್ಯೆ: 249 ಕ್ಕೆ ಉತ್ತರ ಒದಗಿಸುವ ಬಗ್ಗೆ.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶಿವಣ್ಣ ಬಿ. ಇವರು ಮಂಡಿಸಿರುವ ಚುಕ್ಕೆ ಗುರುತು/ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 249 ಕ್ಕೆ ಸಂಬಂಧಿಸಿದಂತೆ ಉತ್ತರದ 250 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ ಎಂದು ತಿಳಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

~~(ಎಸ್ ಎಲ್.ಮಹಾಂತೇಗೌಡ)~~ 8/2/19
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಕಂದಾಯ ಇಲಾಖೆ ಭೂಮಂಜೂರಾತಿ-1

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 249
ಸದಸ್ಯರ ಹೆಸರು : ಶ್ರೀ ಶಿವಣ್ಣ .ಬಿ. (ಆನೇಕಲ್)
ಉತ್ತರಿಸುವ ದಿನಾಂಕ : 11-02-2019
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಆನೇಕಲ್ ತಾಲ್ಲೂಕಿನಲ್ಲಿ 94ಸಿ ಮತ್ತು 94ಸಿಸಿ ಅಡಿಯಲ್ಲಿ ಇದುವರೆವಿಗೂ ಎಷ್ಟು ಅರ್ಜಿಗಳು ಸ್ವೀಕೃತವಾಗಿವೆ (ಮಾಹಿತಿ ನೀಡುವುದು) | ಆನೇಕಲ್ ತಾಲ್ಲೂಕಿನಲ್ಲಿ 94-ಸಿ ರಡಿಯಲ್ಲಿ ಯಾವುದೇ ಅರ್ಜಿಗಳು ಸ್ವೀಕೃತವಾಗಿರುವುದಿಲ್ಲ. 94-ಸಿಸಿ ರಡಿಯಲ್ಲಿ 7309 ಅರ್ಜಿಗಳು ಸ್ವೀಕೃತವಾಗಿರುತ್ತವೆ. |
| ಆ) | ಈ ಪೈಕಿ ಎಷ್ಟು ಅರ್ಜಿಗಳನ್ನು ವಿಲೇವಾರಿ ಮಾಡಲಾಗಿದೆ; ಉಳಿದ ಅರ್ಜಿಗಳನ್ನು ಯಾವ ಕಾಲಮಿತಿಯಲ್ಲಿ ವಿಲೇ ಮಾಡಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು) | 94-ಸಿಸಿ ರಡಿಯಲ್ಲಿ ಇದುವರೆವಿಗೂ 4893 ಅರ್ಜಿಗಳನ್ನು ವಿಲೇವಾರಿ ಮಾಡಲಾಗಿದೆ.<br><br>ಕರ್ನಾಟಕ ಭೂ ಕಂದಾಯ ನಿಯಮಗಳು, 1966ರ ನಿಯಮ 108-ಎಕ್ಸ್ ರಡಿಯಲ್ಲಿ 'One year from the last date prescribed for receipt of applications' ಎಂದು ಅವಕಾಶ ಕಲ್ಪಿಸಿರುವುದರಿಂದ ಆ ಪ್ರಕಾರ ನಿಗದಿತ ಅವಧಿಯೊಳಗೆ ವಿಲೇ ಮಾಡಲು ಕ್ರಮವಹಿಸಲಾಗುವುದು. |

ಸಂಖ್ಯೆ: ಆರ್‌ಡಿ 13 ಎಲ್‌ಜಿಕ್ಯೂ 2019

(ಆರ್.ವಿ.ದೇಶಪಾಂಡೆ)
ಕಂದಾಯ ಸಚಿವರು

ಕರ್ನಾಟಕ ಸರ್ಕಾರ

ಸಂ.ಯುಸೇಇ 13 ಯುಸೇಭಾ 2019

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ
ಬೆಂಗಳೂರು, ದಿನಾಂಕ:08.02.2019

ಇವರಿಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ,
ಬೆಂಗಳೂರು.

ಗೆ:
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಅರವಿಂದ ಲಿಂಬಾವಳಿ (ಮಹದೇವಪುರ) ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:295ಕ್ಕೆ ಉತ್ತರ ನೀಡುವ ಬಗ್ಗೆ.

*****

ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಶ್ರೀ ಅರವಿಂದ ಲಿಂಬಾವಳಿ (ಮಹದೇವಪುರ) ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 295ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ.

ನಿಮ್ಮ ನಂಬುಗೆಯ,

(ಗಿರಿಜಾ ಪಾಟೀಲ)
ಪೀಠಾಧಿಕಾರಿ (ಪ್ರ),
ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 295

ಉತ್ತರಿಸುವ ದಿನಾಂಕ : 11.02.2019

ಸದಸ್ಯರ ಹೆಸರು : ಶ್ರೀ ಅರವಿಂದ ಲಿಂಬಾವಳಿ (ಮಹದೇವಪುರ)

ಉತ್ತರಿಸುವ ಸಚಿವರು : ಮಾನ್ಯ ಯುವ ಸಬಲೀಕರಣ ಹಾಗೂ ಕ್ರೀಡಾ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಪೂರ್ವ ತಾಲ್ಲೂಕು ಮಹದೇವಪುರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಗುಂಜೂರು ಗ್ರಾಮದ ಸರ್ವೆ ನಂ.104ರಲ್ಲಿ 27 ಎಕರೆ 4 ಗುಂಟೆ ಜಮೀನು ಅಂತರರಾಷ್ಟ್ರೀಯ ಕ್ರೀಡಾಂಗಣ ನಿರ್ಮಾಣಕ್ಕಾಗಿ ಕಾಯ್ದಿರಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ: | ಹೌದು |
| ಆ) | ಈ ಜಮೀನನ್ನು ಕ್ರೀಡಾ ಇಲಾಖೆಯ ಹೆಸರಿಗೆ ಪಡೆಯಲಾಗಿದೆಯೇ: | ಈ ಜಮೀನನ್ನು ಇಲಾಖೆಗೆ ಹಸ್ತಾಂತರಿಸಲಾಗಿದ್ದು, ಆರ್.ಟಿ.ಸಿ ಯಲ್ಲಿ ಇಲಾಖೆಯ ಹೆಸರು ನಮೂದಿಸಲಾಗಿದೆ. |
| ಇ) | ಹಾಗಿದ್ದಲ್ಲಿ ಕ್ರೀಡಾಂಗಣ ನಿರ್ಮಿಸುವ ಯೋಜನೆ ಸರ್ಕಾರದ ಮುಂದಿದೆಯೆ; ಈ ಬಗ್ಗೆ ಕೈಗೊಂಡಿರುವ ಕ್ರಮಗಳೇನು (ವಿವರ ನೀಡುವುದು) | ಹೌದು. ಬೆಂಗಳೂರು ನಗರ ಜಿಲ್ಲೆಯ ಪೂರ್ವ ತಾಲ್ಲೂಕು ವರ್ತೂರು ಹೋಬಳಿ ಗುಂಜೂರು ಗ್ರಾಮದ ಸರ್ವೇ ನಂ. 104 ರಲ್ಲಿ 27.04 ಎಕರೆ ನಿವೇಶನವನ್ನು ವಿಶೇಷ ಜಿಲ್ಲಾಧಿಕಾರಿಗಳ ಆದೇಶ ಸಂಖ್ಯೆ: ಎಲ್.ಎನ್.ಡಿ (ಪೂ) ಸಿ.ಆರ್:124/2008-09 ದಿನಾಂಕ: 13.02.2009 ರಂತೆ ಅಂತರ-ರಾಷ್ಟ್ರೀಯ ಮಟ್ಟದ ಕ್ರೀಡಾ ಸಂಕೀರ್ಣ ನಿರ್ಮಾಣ ಮಾಡಲು ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಹಸ್ತಾಂತರಿಸಲಾಗಿದೆ.<br><br>2018-19ನೇ ಸಾಲಿನ ಮಾನ್ಯ ಮುಖ್ಯಮಂತ್ರಿಗಳ ಆಯವ್ಯಯ ಭಾಷಣದ ಘೋಷಣೆಯಂತೆ, ಗುಂಜೂರು ಸೇರಿದಂತೆ ಬೆಂಗಳೂರಿನ 04 ಸ್ಥಳಗಳಲ್ಲಿ ಅಂತರ-ರಾಷ್ಟ್ರೀಯ ಗುಣಮಟ್ಟದ ಕ್ರೀಡಾ ಸಂಕೀರ್ಣಗಳನ್ನು ನಿರ್ಮಿಸಲು ಒಟ್ಟು ರೂ 17.00 ಕೋಟಿಗಳನ್ನು ಮೀಸಲಿರಿಸಲಾಗಿದೆ. |
| ಈ) | ಈ ಜಮೀನನ್ನು ಇಲಾಖೆಯ ಹೆಸರಿಗೆ ಪಡೆಯದಿದ್ದಲ್ಲಿ ಕಾರಣವೇನು (ವಿವರ ನೀಡುವುದು) | ಸದರಿ ನಿವೇಶನವನ್ನು ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಮಂಜೂರು ಮಾಡಲಾಗಿದ್ದು, ಆರ್.ಟಿ.ಸಿ. ಸೇರಿದಂತೆ ಸರ್ಕಾರಿ ದಾಖಲೆಗಳಲ್ಲಿ ಇಲಾಖೆಯ ಹೆಸರಿಗೆ ಪಡೆಯಲಾಗಿದೆ. ಆದರೆ, ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರು ಇಲಾಖೆಗೆ ಮಂಜೂರಾದ ನಿವೇಶನವು ನೆಡುತೋಪನ್ನು ಹೊಂದಿರುವುದರಿಂದ ಕರ್ನಾಟಕ ಅರಣ್ಯ ಕಾಯ್ದೆ, 1963 ರನ್ವಯ ಸೆಕ್ಷನ್ 4ರನ್ವಯ ಅರಣ್ಯ ಪ್ರದೇಶವೆಂದು ಘೋಷಿಸುವ ಬಗ್ಗೆ ಮೇಲಾಧಿಕಾರಿಗಳಿಗೆ ವರದಿ ನೀಡಿರುವುದಾಗಿ ಹಾಗೂ ಇಲಾಖೆಗೆ ಮಂಜೂರು ಮಾಡಲಾಗಿರುವ ಮಂಜೂರಾತಿ ಆದೇಶವನ್ನು ರದ್ದುಪಡಿಸಲು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರನ್ನು ಕೋರಿರುವುದಾಗಿ ತಿಳಿಸಿರುವ ಹಿನ್ನೆಲೆಯಲ್ಲಿ ಕ್ರೀಡಾಂಗಣ ನಿರ್ಮಾಣ ಕಾರ್ಯ ಆರಂಭಿಸಲು ಸಾಧ್ಯವಾಗಿರುವುದಿಲ್ಲ. |

ಸಂಖ್ಯೆ: ಯುಸಕ್ರೀ 13 ಯುಸೇಭಾ 2019.

(ರಹೀಂ ಖಾನ್)
ಯುವ ಸಬಲೀಕರಣ ಹಾಗೂ ಕ್ರೀಡಾ ಸಚಿವರು.

**ಕರ್ನಾಟಕ ಸರ್ಕಾರ**

ಸಂಖ್ಯೆ: ಕಾಇ 15 ಎಲ್‌ಎಸ್‌ಐ 2019.

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸಸೌಧ
ಬೆಂಗಳೂರು, ದಿನಾಂಕ:07-02-2019.

**ಇವರಿಂದ,**
ಸರ್ಕಾರದ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.
ವಿಕಾಸಸೌಧ, ಬೆಂಗಳೂರು-560 001.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು.

**ಮಾನ್ಯರೇ,**

**ವಿಷಯ:-** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಶಿವಣ್ಣ, ಬಿ (ಆನೇಕಲ್) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **247** ಕ್ಕೆ ಉತ್ತರಗಳನ್ನು ಕಳುಹಿಸುವ ಬಗ್ಗೆ.

***********

ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಶಿವಣ್ಣ, ಬಿ (ಆನೇಕಲ್), ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **247 ಕ್ಕೆ** ಸಂಬಂಧಿಸಿದ ಉತ್ತರದ 150 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿ ಕೊಡಲು ನಾನು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ

Ramani
(ರಮಣಿ)
ಪೀಠಾಧಿಕಾರಿ-5
ಕಾರ್ಮಿಕ ಇಲಾಖೆ
(ಕಾ.ರಾ.ವಿ.ಯೋ.ವೈ.ಸೇವೆಗಳು)

# ಕರ್ನಾಟಕ ವಿಧಾನ ಸಭೆ

| 1 | ಮಾನ್ಯ ಸದಸ್ಯರ ಹೆಸರು | ಶ್ರೀ ಶಿವಣ್ಣ ಬಿ. (ಆನೇಕಲ್) |
|---|---|---|
| 2 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 247 |
| 3 | ಉತ್ತರಿಸಬೇಕಾದ ದಿನಾಂಕ | 11-02-2019 |
| 4. | ಉತ್ತರಿಸಬೇಕಾದವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಆನೇಕಲ್ ತಾಲ್ಲೂಕಿನ ಇಗ್ಗಲೂರಿಗೆ ಇ.ಎಸ್.ಐ ಆಸ್ಪತ್ರೆ ಮಂಜೂರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| (ಆ) | ಬಂದಿದ್ದಲ್ಲಿ, ಈ ಆಸ್ಪತ್ರೆಯ ನಿರ್ಮಾಣಕ್ಕೆ ಅಗತ್ಯವಾದ ಜಮೀನು ನೀಡಿದ್ದರೂ ಇಲ್ಲಿಯವರೆವಿಗೂ ಕಟ್ಟಡ ಕಾಮಗಾರಿ ಆರಂಭಿಸದಿರಲು ಕಾರಣಗಳೇನು(ಪೂರ್ಣ ಮಾಹಿತಿ ನೀಡುವುದು); | ಆಸ್ಪತ್ರೆಯ ಕಟ್ಟಡ ನಿರ್ಮಾಣ ಕಾರ್ಯವು ಕಾರ್ಮಿಕರ ರಾಜ್ಯ ವಿಮಾ ನಿಗಮಕ್ಕೆ ಸಂಬಂಧಿಸಿರುತ್ತದೆ. |
| (ಇ) | ಕಾರ್ಮಿಕರ ಆರೋಗ್ಯದ ದೃಷ್ಟಿಯಿಂದ ಮಂಜೂರಾಗಿರುವ ಇ.ಎಸ್.ಐ. ಆಸ್ಪತ್ರೆಯ ಕಟ್ಟಡ ಕಾಮಗಾರಿಯನ್ನು ಯಾವಾಗ ಪ್ರಾರಂಭಿಸಿ ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುವುದು? (ಮಾಹಿತಿ ನೀಡುವುದು) | ಇಗ್ಗಲೂರಿನ ಇ.ಎಸ್.ಐ ಆಸ್ಪತ್ರೆಯನ್ನು ರಾಜ್ಯ ಸರ್ಕಾರದ ವತಿಯಿಂದ ನಿರ್ವಹಿಸುವುದಾಗಿ ಕಾರ್ಮಿಕರ ರಾಜ್ಯ ವಿಮಾ ನಿಗಮಕ್ಕೆ ದಿನಾಂಕ:17-10-2018 ರಂದು ಸರ್ಕಾರವು ತನ್ನ ಸಹಮತ ನೀಡಿರುತ್ತದೆ.<br>ಇದು ಕಾರ್ಮಿಕರ ರಾಜ್ಯ ವಿಮಾ ನಿಗಮ, ನವದೆಹಲಿ, ಇಲ್ಲಿ ಬಾಕಿ ಇರುತ್ತದೆ. |

ಕಾಇ 15 ಎಲ್ಎಸ್ಐ 2019

(ವೆಂಕಟರಮಣಪ್ಪ)
ಕಾರ್ಮಿಕ ಸಚಿವರು

ಕರ್ನಾಟಕ ಸರ್ಕಾರ

ಸಂ: ಅಪಜೀ 40 ಅಅಸೇ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 08-02-2019

ಇವರಿಂದ

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ,
ಬಹುಮಹಡಿ ಕಟ್ಟಡ, ಬೆಂಗಳೂರು.

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ: 498 ಕ್ಕೆ ಉತ್ತರ ಒದಗಿಸುವ ಬಗ್ಗೆ.

:-:-:

ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ: 498 ಕ್ಕೆ ಸಂಬಂಧಿಸಿದ ಉತ್ತರದ 250 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ನಿಮ್ಮ ನಂಬುಗೆಯ,

(ಕೆ. ಉಮಾಪತಿ) 8/2/19
ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು)
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ.

08/02/19

| ಕರ್ನಾಟಕ ವಿಧಾನ ಸಭೆ | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : | 498 |
| ಸದಸ್ಯರ ಹೆಸರು : | ಶ್ರೀ ಯಶವಂತರಾಯಗೌಡ ವಿಠಲಗೌಡ ಪಾಟೀಲ್ (ಇಂಡಿ) |
| ಉತ್ತರಿಸಬೇಕಾದ ದಿನಾಂಕ : | 11.02.2019 |
| ಉತ್ತರಿಸುವವರು : | ಮಾನ್ಯ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು |

*****

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಅರಣ್ಯ ಇಲಾಖೆಯಲ್ಲಿ ಅರಣ್ಯ ರಕ್ಷಕ, ವೀಕ್ಷಕ, ಉಪ ವಲಯ ಅರಣ್ಯಾಧಿಕಾರಿ ಹಾಗೂ ಮೋಜಣಿದಾರರ ಹುದ್ದೆಗಳು ಸೇರಿದಂತೆ ಹಲವಾರು ಹುದ್ದೆಗಳನ್ನು ನೇಮಕ ಮಾಡುವಾಗ ರಾಜ್ಯ ಮಟ್ಟದಲ್ಲಿ ನೇಮಕಾತಿ ಮಾಡಿಕೊಳ್ಳುತ್ತಿರುವುದು ನಿಜವೇ; | ಹೌದು. |
| ಆ) | ಹಾಗಿದ್ದಲ್ಲಿ, ಸದರಿ ಹುದ್ದೆಗಳಿಗೆ ಪದೋನ್ನತಿಯನ್ನು ನೀಡುವಾಗ ಜೇಷ್ಠತಾ ಪಟ್ಟಿಯನ್ನು ಆಯಾ ವೃತ್ತದ ವ್ಯಾಪ್ತಿಯಲ್ಲಿ ತಯಾರಿಸಲಾಗುವುದೇ; ಅಥವಾ ರಾಜ್ಯ ಮಟ್ಟದಲ್ಲಿ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗುವುದೇ; | ಅರಣ್ಯ ವೀಕ್ಷಕ ಹಾಗೂ ಅರಣ್ಯ ರಕ್ಷಕರ ಜೇಷ್ಠತಾ ಪಟ್ಟಿಯನ್ನು ವೃತ್ತ ಮಟ್ಟದಲ್ಲಿ ಸಿದ್ದಪಡಿಸಿ ಪ್ರಕಟಿಸಲಾಗುತ್ತದೆ.<br>ಉಪ ವಲಯ ಅರಣ್ಯಾಧಿಕಾರಿ ಹಾಗೂ ಮೋಜಣಿದಾರರ ಜೇಷ್ಠತಾ ಪಟ್ಟಿಯನ್ನು ಆಯಾ ವೃತ್ತ ಮಟ್ಟದಲ್ಲಿ ಸಿದ್ದಪಡಿಸಿ ಪ್ರಕಟಿಸಲಾಗುತ್ತದೆ. ನಂತರ, ಎಲ್ಲಾ 13 ವೃತ್ತಗಳ ಜೇಷ್ಠತಾ ಪಟ್ಟಿಯನ್ನು ರಾಜ್ಯ ಮಟ್ಟದಲ್ಲಿ ಸಂಯೋಜಿಸಿ, ರಾಜ್ಯ ಮಟ್ಟದ ಸಂಯೋಜಿತ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗುತ್ತದೆ. ಹಾಗೂ ವಲಯ ಅರಣ್ಯಾಧಿಕಾರಿಗಳ ಜೇಷ್ಠತಾ ಪಟ್ಟಿಯನ್ನು ರಾಜ್ಯ ಮಟ್ಟದಲ್ಲಿ ಪ್ರಕಟಿಸಲಾಗುತ್ತದೆ. |
| ಇ) | ಆಯಾ ವೃತ್ತದಲ್ಲಿ ಪದೋನ್ನತಿ ನೀಡುವಾಗ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲು ಕಾರಣಗಳೇನು; | ವೃತ್ತ ಮಟ್ಟದ ಜೇಷ್ಠತಾ ಪಟ್ಟಿಯನ್ನು ಆಧರಿಸಿ, ಅರಣ್ಯ ವೀಕ್ಷಕ, ಅರಣ್ಯ ರಕ್ಷಕರ ಬಡ್ತಿ ಪ್ರಕ್ರಿಯೆಯನ್ನು ವೃತ್ತ ಮಟ್ಟದಲ್ಲಿ ಕೈಗೊಳ್ಳಲಾಗುತ್ತದೆ. |
| ಈ) | ರಾಜ್ಯ ಮಟ್ಟದಲ್ಲಿ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸದಿರಲು ಕಾರಣಗಳೇನು; | ಪ್ರಸ್ತುತ ಚಾಲ್ತಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮದ ಪ್ರಕಾರ ಅರಣ್ಯ ವೀಕ್ಷಕ ಹಾಗೂ ಅರಣ್ಯ ರಕ್ಷಕ ಹುದ್ದೆಗೆ ನೇಮಕಾತಿ ಪ್ರಾಧಿಕಾರ ಆಯಾ ವಿಭಾಗಕ್ಕೆ ಸಂಬಂಧಿಸಿದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಆಗಿರುತ್ತಾರೆ.<br>ಹೀಗಾಗಿ, ಅರಣ್ಯ ವೀಕ್ಷಕ ಹಾಗೂ ಅರಣ್ಯ ರಕ್ಷಕರ ಜೇಷ್ಠತಾ ಪಟ್ಟಿಯನ್ನು ರಾಜ್ಯ ಮಟ್ಟದಲ್ಲಿ ಪ್ರಕಟಿಸುವುದಿಲ್ಲ. |

| ಉ) | ಈ ರೀತಿ ಆಯಾ ವೃತ್ತದಲ್ಲಿ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವುದರಿಂದ ಬೆಳಗಾವಿ ವೃತ್ತದಲ್ಲಿ ಸುಮಾರು 15–20 ವರ್ಷದಿಂದ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗೆ ಪದೋನ್ನತಿ ದೊರೆಯದೆ ಅನ್ಯಾಯವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುವುದಿಲ್ಲ |
|---|---|---|
| ಊ) | ಬಂದಿದ್ದಲ್ಲಿ, ಸದರಿ ಹುದ್ದೆಗಳಿಗೆ ರಾಜ್ಯ ಮಟ್ಟದಲ್ಲಿ ಜೇಷ್ಠತಾ ಪಟ್ಟಿಯನ್ನು ತಯಾರಿಸಲಾಗುವುದೇ; ಇವರ ಬಗ್ಗೆ ಸರ್ಕಾರದ ನಿಲುವೇನು; | ಅನ್ವಯಿಸುವುದಿಲ್ಲ. |
| ಋ) | ಬೆಳಗಾವಿ ವೃತ್ತದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅರಣ್ಯ ರಕ್ಷಕ, ವೀಕ್ಷಕ, ಉಪ ವಲಯ ಅರಣ್ಯಾಧಿಕಾರಿ ಹಾಗೂ ಮೋಜಣಿದಾರರ ಹುದ್ದೆಗಳಿಗೆ ಪದೋನ್ನತಿ ನೀಡುವಾಗ ಅನ್ಯಾಯವಾಗದಂತೆ ಸರ್ಕಾರ ಕೈಗೊಳ್ಳುವ ಕ್ರಮಗಳೇನು? (ವಿವರ ನೀಡುವುದು) | ಅರಣ್ಯ ರಕ್ಷಕ, ಅರಣ್ಯ ವೀಕ್ಷಕ, ಉಪ ವಲಯ ಅರಣ್ಯಾಧಿಕಾರಿ ಹಾಗೂ ಮೋಜಣಿದಾರ ಹುದ್ದೆಗಳಿಗೆ ಸಂಬಂಧಿಸಿದಂತೆ ಜೇಷ್ಠತಾ ಪಟ್ಟಿಯನ್ನು ಆಧರಿಸಿ ಹಾಗೂ ಉದ್ಭವಿಸುವ ರಿಕ್ತ ಸ್ಥಾನಗಳಿಗೆ ಅನುಗುಣವಾಗಿ ಅರಣ್ಯ ರಕ್ಷಕ ಹಾಗೂ ಅರಣ್ಯ ವೀಕ್ಷಕ ಹುದ್ದೆಗಳಿಗೆ ಬಡ್ತಿ ಪ್ರಕ್ರಿಯೆಯನ್ನು ಕೈಗೊಳ್ಳಲಾಗುತ್ತದೆ. |

**ಕಡತ ಸಂಖ್ಯೆ: ಅಪಜೀ 40 ಅಅಸೇ 2019**

**(ಸತೀಶ್ ಲ. ಜಾರಕಿಹೊಳಿ)**
**ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು.**

ಕರ್ನಾಟಕ ಸರ್ಕಾರ

ಕಂ.ಇ. 18 ಎಂ.ಆರ್.ಆರ್ 2019

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ:11/02/2019

ಇಂದ

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು
ಕಂದಾಯ ಇಲಾಖೆ (ವಿ.ನಿ, ಭೂಮಿ & ಯುಪಿಓಆರ್)

ಇವರಿಗೆ

ಕಾರ್ಯದರ್ಶಿಗಳು
ಕರ್ನಾಟಕ ವಿಧಾನಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ:-ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ. ಅರಗ ಜ್ಞಾನೇಂದ್ರ (ತೀರ್ಥಹಳ್ಳಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:471 ಕ್ಕೆ ಉತ್ತರಿಸುವ ಬಗ್ಗೆ.

*****

ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ.ಅರಗ ಜ್ಞಾನೇಂದ್ರ (ತೀರ್ಥಹಳ್ಳಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:471 ಕ್ಕೆ ದಿನಾಂಕ:11.02.2019 ರಂದು ಉತ್ತರಿಸಬೇಕಾಗಿದ್ದು, ಸದರಿ ಪ್ರಶ್ನೆಗೆ ಉತ್ತರವನ್ನು ತಯಾರಿಸಿದ್ದು ಉತ್ತರಗಳ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ

(ಎಂ. ತಿಪ್ಪೀರಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ)
ಕಂದಾಯ ಇಲಾಖೆ (ಭೂಮಿ & ಯುಪಿಓಆರ್)

<u>ಕರ್ನಾಟಕ ವಿಧಾನ ಸಭಾ</u>

| ಚುಕ್ಕೆ ಗುರುತಿಲ್ಲದ ಪ್ರಶ್ನೆ | 471 |
|---|---|
| ವಿಧಾನ ಸಭಾ ಸದಸ್ಯರ ಹೆಸರು | ಶ್ರೀ. ಅರಗ ಜ್ಞಾನೇಂದ್ರ (ತೀರ್ಥಹಳ್ಳಿ) |
| ಉತ್ತರಿಸಬೇಕಾದ ದಿನಾಂಕ | 11-02-2019 |
| ಉತ್ತರಿಸುವ ಸಚಿವರು | ಮಾನ್ಯ ಕಂದಾಯ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬಹು ವಾರ್ಷಿಕ ಬೆಳೆಗಳಾದ ಅಡಿಕೆ, ತೆಂಗು, ಕಾಫಿ, ಕಾಳು ಮೆಣಸು, ರಬ್ಬರ್ ಮತ್ತು ಇತರೆ ಬೆಳೆಗಳನ್ನು ಪ್ರತಿ ವರ್ಷ ಪಹಣಿಯ ಬೆಳೆ ಕಾಲಂನಲ್ಲಿ ಭೂಮಿ ತಂತ್ರಾಂಶದಲ್ಲಿ ಹೊಸದಾಗಿ ನಮೂದು ಮಾಡುವುದರ ಬದಲಾಗಿ ರೈತರು ಬೆಳೆ ಬದಲಾಯಿಸಿದ ಸಂದರ್ಭದಲ್ಲಿ ಅರ್ಜಿ ನೀಡಿದ ಮೇರೆಗೆ ಬದಲಾಯಿಸುವ ಕ್ರಮವನ್ನು ಜಾರಿಗೆ ತರುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಪ್ರಸ್ತುತ ಭೂಮಿ ತಂತ್ರಾಂಶದಲ್ಲಿ ಹಾಲಿ ಮುಂಗಾರು, ಹಿಂಗಾರು ಮತ್ತು ಬೇಸಿಗೆ ಋತುಮಾನಗಳಲ್ಲಿ ಪಹಣಿಗಳಲ್ಲಿ ದಾಖಲಾಗಿರುವ ಖಾಯಂ ಮತ್ತು ತಾತ್ಕಾಲಿಕ ಬೆಳೆಗಳನ್ನು ಹಿಂದಿನ ಋತುಮಾನದಿಂದ ನಂತರದ ಋತುಮಾನಕ್ಕೆ ಮುಂದುವರೆಸಲು ತಂತ್ರಾಂಶದಲ್ಲಿ ಅವಕಾಶ ಕಲ್ಪಿಸಿಕೊಡಲಾಗಿದೆ. ಹಾಗಾಗಿ ಈ ಹಿಂದಿನ ಋತುಮಾನದ ಬೆಳೆಗಳು ನಂತರದ ಋತುಮಾನಕ್ಕೆ ವರ್ಗಾವಣೆ ಆಗುತ್ತಿರುತ್ತವೆ. ಅಕಸ್ಮಾತ್ ಯಾವುದೇ ಬೆಳೆಯು ನಮೂದಾಗದೆ ಇದ್ದಲ್ಲಿ ಸಂಬಂಧಿಸಿದ ಗ್ರಾಮಲೆಕ್ಕಿಗರಿಗೆ ಕೋರಿಕೆ ಸಲ್ಲಿಸಿದ್ದಲ್ಲಿ ಅಥವಾ ಗ್ರಾಮಲೆಕ್ಕಿಗರ ಸ್ಥಳ ಪರಿಶೀಲನೆ ಮೂಲಕ ಪಹಣಿಯಲ್ಲಿ ಬೆಳೆಯನ್ನು ನಮೂದು ಮಾಡಲು ಗ್ರಾಮಲೆಕ್ಕಿಗರ ಲಾಗಿನ್ ಮೂಲಕವೇ ನಮೂದಿಸಿ ಅಂತಿಮ ಸಹಿ ಮಾಡುವ ಅಧಿಕಾರವನ್ನು ತಂತ್ರಾಂಶದಲ್ಲಿ ಕಲ್ಪಿಸಲಾಗಿದೆ. ಆದ ಕಾರಣ ಯಾವುದೇ ಬೆಳೆ ನಮೂದಾಗದೆ ಬಿಟ್ಟು ಹೋಗುವಂತ ಸಂದರ್ಭ ಉದ್ಭವಿಸದಂತೆ ಕ್ರಮ ಕೈಗೊಳ್ಳಲಾಗಿದೆ. |
| ಆ | ಹಾಲಿ ಇರುವ ಪದ್ಧತಿಯಲ್ಲಿ ಕಾಲ ಕಾಲಕ್ಕೆ ಸರಿಯಾಗಿ ನಮೂದು ಮಾಡದೇ ಇರುವುದರಿಂದ ಬೆಳೆ ಕಾಲಂನಲ್ಲಿ ಯಾವುದೇ ಬೆಳೆಯ ಹೆಸರು ಬರದೇ ಇರುವುದರಿಂದ ರೈತರಿಗೆ ಬೆಳೆಸಾಲ ಪಡೆಯಲು ಅನಾನುಕೂಲವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ? | |

ಆರ್.ವಿ.ದೇಶಪಾಂಡೆ,
ಕಂದಾಯ ಸಚಿವರು

## ಕರ್ನಾಟಕ ಸರ್ಕಾರ

ಸಂ:ಮಮಇ 45 ಪಿಸಿಬಿ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 11/02/2019

ಇವರಿಂದ:
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ,
ಬೆಂಗಳೂರು.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ / ~~ಪರಿಷತ್~~ ಸಚಿವಾಲಯ,
ವಿಧಾನಸೌಧ,
ಬೆಂಗಳೂರು

ಮಾನ್ಯರೆ,

ವಿಷಯ: ಶ್ರೀ/~~ಶ್ರೀಮತಿ~~ ಮುರುಗೇಶ್ ರುದ್ರಪ್ಪ ನಿರಾಣಿ ಮಾನ್ಯ ವಿಧಾನ ಸಭಾ /~~ವಿಧಾನ ಪರಿಷತ್~~ ಸದಸ್ಯರು ಇವರು ಮಂಡಿಸಿರುವ ಚುಕ್ಕೆ ~~ಗುರುತಿನ~~ / ಗುರುತಿಲ್ಲದ ಪ್ರಶ್ನೆ ಸಂಖ್ಯೆ: 522 ಕ್ಕೆ ಉತ್ತರಿಸುವ ಕುರಿತು

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ/~~ಶ್ರೀಮತಿ~~ ಮುರುಗೇಶ್ ರುದ್ರಪ್ಪ ನಿರಾಣಿ ಮಾನ್ಯ ವಿಧಾನ ಸಭಾ /~~ವಿಧಾನ ಪರಿಷತ್~~ ಸದಸ್ಯರು ಇವರು ಮಂಡಿಸಿರುವ ಚುಕ್ಕೆ ~~ಗುರುತಿನ~~ / ಗುರುತಿಲ್ಲದ ಪ್ರಶ್ನೆ ಸಂಖ್ಯೆ: 522 ಕ್ಕೆ ಉತ್ತರವನ್ನು 100 ಪ್ರತಿಗಳಲ್ಲಿ ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಸಂಧ್ಯಾ ಎಲ್ ನಾಯಕ್)
ಸರ್ಕಾರದ ಅಧೀನ ಕಾರ್ಯದರ್ಶಿ-1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
~~ಹಾಗೂ~~ ಹಿರಿಯ ನಾಗರೀಕರ ಸಬಲೀಕರಣ ಇಲಾಖೆ.

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 522

ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಮುರುಗೇಶ್ ರುದ್ರಪ್ಪ ನಿರಾಣಿ (ಬೀಳಗಿ)

ಉತ್ತರಿಸುವವರು : ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು

ಉತ್ತರಿಸಬೇಕಾದ ದಿನಾಂಕ : 11.02.2019

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬಾಗಲಕೋಟೆ ಜಿಲ್ಲೆಯ ಬೀಳಗಿ ವಿಧಾನಸಭಾ ವ್ಯಾಪ್ತಿಯಲ್ಲಿ ಎಷ್ಟು ಅಂಗನವಾಡಿ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ; | ಬಾಗಲಕೋಟೆ ಜಿಲ್ಲೆಯ ಬೀಳಗಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿರುವ ಅಂಗನವಾಡಿ ಕೇಂದ್ರಗಳ ಸಂಖ್ಯೆ: 376 |
| ಆ) | ಈ ಕೇಂದ್ರಗಳಲ್ಲಿ ಕಳಪೆ ಗುಣಮಟ್ಟದ ಆಹಾರ ಧಾನ್ಯಗಳು ಪೂರೈಕೆಯಾಗುತ್ತಿವೆ ಯೆಂಬ ಆರೋಪವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಗುಣಮಟ್ಟದ ಆಹಾರ ಧಾನ್ಯ ವಿತರಣೆ ಮಾಡುವಲ್ಲಿ ಸರ್ಕಾರ ತೆಗೆದುಕೊಳ್ಳುವ ಕ್ರಮವೇನು; | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಇ) | ಈ ಕೇಂದ್ರಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳ ಸಂಖ್ಯೆ ಎಷ್ಟು; ಖಾಲಿಯಿರುವ ಹುದ್ದೆಗಳೆಷ್ಟು; ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ಬೀಳಗಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಅಂಗನವಾಡಿ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿ ವಿವರ ಈ ಕೆಳಗಿನಂತಿದೆ. (see tables below) |

**ಅಂಗನವಾಡಿ ಕಾರ್ಯಕರ್ತೆ ಹುದ್ದೆಗಳು**

| ತಾಲೂಕಿನ ಹೆಸರು | ಮಂಜೂರು | ಭರ್ತಿ | ಖಾಲಿ |
|---|---|---|---|
| ಬೀಳಗಿ | 208 | 194 | 14 |
| ಬಾದಾಮಿ | 71 | 69 | 2 |
| ಬಾಗಲಕೋಟೆ | 97 | 93 | 4 |
| ಒಟ್ಟು | 376 | 356 | 20 |

**ಅಂಗನವಾಡಿ ಸಹಾಯಕಿ ಹುದ್ದೆಗಳು**

| ತಾಲೂಕಿನ ಹೆಸರು | ಮಂಜೂರು | ಭರ್ತಿ | ಖಾಲಿ |
|---|---|---|---|
| ಬೀಳಗಿ | 208 | 175 | 33 |
| ಬಾದಾಮಿ | 71 | 63 | 8 |
| ಬಾಗಲಕೋಟೆ | 97 | 86 | 11 |
| ಒಟ್ಟು | 376 | 324 | 52 |

ದಿನಾಂಕ: 26-01-2019 ರಂದು ಜಿಲ್ಲಾಧಿಕಾರಿಗಳು ಬಾಗಲಕೋಟೆ ರವರ ಅಧ್ಯಕ್ಷತೆಯಲ್ಲಿ ಸಭೆ ನಡೆಸಿ ಅಂಗನವಾಡಿ ಕಾರ್ಯಕರ್ತೆ ಹಾಗೂ ಸಹಾಯಕಿಯರ ಹುದ್ದೆಗಳಿಗೆ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗಿದೆ.

ಈ) ಈ ಹುದ್ದೆಗಳನ್ನು ಯಾವ ಕಾಲಮಿತಿಯೊಳಗೆ ಭರ್ತಿ ಮಾಡಲಾಗುವುದು? (ವೃಂದವಾರು, ಅಂಗನವಾಡಿ ಕೇಂದ್ರಗಳ ಹೆಸರು ಸಮೇತ ಸಂಪೂರ್ಣ ಮಾಹಿತಿ ನೀಡುವುದು)

(ಅ) ದಿನಾಂಕ: 26-01-2019 ರಂದು ಜಿಲ್ಲಾಧಿಕಾರಿಗಳು ಬಾಗಲಕೋಟೆ ರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಅಂಗನವಾಡಿ ಕಾರ್ಯಕರ್ತೆ ಹಾಗೂ ಸಹಾಯಕಿಯರ ಹುದ್ದೆಗಳಿಗೆ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗಿದೆ. ವಿವರ ಈ ಕೆಳಗಿನಂತಿದೆ. ವೃಂದವಾರು ಮತ್ತು ಕೇಂದ್ರವಾರು ವಿವರವನ್ನು ಅನುಬಂಧ (1)ರಲ್ಲಿ ಒದಗಿಸಲಾಗಿದೆ.

| ತಾಲೂಕಿನ ಹೆಸರು | ಅಂಗನವಾಡಿ ಕಾರ್ಯಕರ್ತೆ | ಅಂಗನವಾಡಿ ಸಹಾಯಕಿ |
|---|---|---|
| ಬೀಳಗಿ | 12 | 27 |
| ಬಾದಾಮಿ | 1 | 4 |
| ಬಾಗಲಕೋಟೆ | 0 | 4 |
| ಒಟ್ಟು | 13 | 35 |

(ಆ) ದಿನಾಂಕ: 25-01-2019 ರಂದು ಖಾಲಿ ಇರುವ ಅಂಗನವಾಡಿ ಕಾರ್ಯಕರ್ತೆ ಹಾಗೂ ಸಹಾಯಕಿಯರ ಹುದ್ದೆಗಳ ಭರ್ತಿಗಾಗಿ ಅಧಿಸೂಚನೆ ಹೊರಡಿಸಲಾಗಿದೆ. ವಿವರ ಈ ಕೆಳಕಂಡಂತೆ ಇದೆ.

| ತಾಲೂಕಿನ ಹೆಸರು | ಅಂಗನವಾಡಿ ಕಾರ್ಯಕರ್ತೆ | ಅಂಗನವಾಡಿ ಸಹಾಯಕಿ |
|---|---|---|
| ಬೀಳಗಿ | 0 | 7 |
| ಬಾದಾಮಿ | 1 | 3 |
| ಬಾಗಲಕೋಟೆ | 4 | 7 |
| ಒಟ್ಟು | 5 | 17 |

ಅರ್ಜಿ ಕರೆದ ಅಂಗನವಾಡಿ ಕೇಂದ್ರಗಳ ವಿವರ ಅನುಬಂಧ (2) ರಲ್ಲಿ ಒದಗಿಸಲಾಗಿದೆ.

ಸಂ:ಮಮಇ 45 ಐಸಿಡಿ 2019

(ಡಾ. ಜಯಮಾಲ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ವಿಧಾನ ಸಭಾ ಸದಸ್ಯರಾದ ಶ್ರೀ ಮುರುಗೇಶ್ ರುದ್ರಪ್ಪ ನಿರಾಣಿ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂ:522ಕ್ಕೆ ಅನುಬಂಧ-1

| ಕ್ರ ಸಂ | ತಾಲ್ಲೂಕಿನ ಹೆಸರು | ಅಂಗನವಾಡಿ ಕಾರ್ಯಕರ್ತೆ | ಅಂಗನವಾಡಿ ಸಹಾಯಕಿ |
|---|---|---|---|
| 1 | ಬೀಳಗಿ | ಯಳ್ಳಿಗುತ್ತಿ-31 | ಯಳ್ಳಿಗುತ್ತಿ-1 |
| 2 | ಬೀಳಗಿ | ಬಾದರದಿನ್ನಿ-1 | ಯಳ್ಳಿಗುತ್ತಿ-29 |
| 3 | ಬೀಳಗಿ | ಕಡಪಟ್ಟಿ-10 | ಅನಗವಾಡಿ-44 |
| 4 | ಬೀಳಗಿ | ಚಿಕ್ಕಹಂಚಿನಾಳ-6 | ಗಲಗಲಿ-10 |
| 5 | ಬೀಳಗಿ | ಗಲಗಲಿ-28 | ಗಲಗಲಿ-28 |
| 6 | ಬೀಳಗಿ | ರೊಳ್ಳಿ-22 | ಕೋಲೂರು ಆರ್.ಸಿ |
| 7 | ಬೀಳಗಿ | ಬೂದಿಹಾಳ ಎಸ್.ಎ-13 | ರೊಳ್ಳಿ |
| 8 | ಬೀಳಗಿ | ಅನಗವಾಡಿ-44 | ಬೂದಿಹಾಳ ಎಸ್.ಎ-14 |
| 9 | ಬೀಳಗಿ | ಲಿಂಗಾಪೂರ ಎಸ್.ಕೆ 40 | ಬೂದಿಹಾಳ ಎಸ್.ಎ.-45 |
| 10 | ಬೀಳಗಿ | ಕೊಪ್ಪ ಎಸ್.ಕೆ-46 | ಕೊಪ್ಪ ಎಸ್.ಆರ್-26 |
| 11 | ಬೀಳಗಿ | ಸಿದ್ದಾಪೂರು-19 | ಕೊಪ್ಪ ಎಸ್.ಆರ್-46 |
| 12 | ಬೀಳಗಿ | ಸಿದ್ದಾಪೂರು-29 | ಸಿರಗುಪ್ಪಿ-43 |
| 13 | ಬೀಳಗಿ | - | ಜಿಸನಾಳ-5 |
| 14 | ಬೀಳಗಿ | - | ಜಿಸನಾಳ-7 |
| 15 | ಬೀಳಗಿ | - | ಜಿಸನಾಳ-13 |
| 16 | ಬೀಳಗಿ | - | ಸಿದ್ದಾಪೂರ-29 |
| 17 | ಬೀಳಗಿ | - | ಸುನ್ನ-29 |
| 18 | ಬೀಳಗಿ | - | ನಾಗರಾಳ-28 |
| 19 | ಬೀಳಗಿ | - | ನಾಗರಾಳ-17 |
| 20 | ಬೀಳಗಿ | - | ನಾಗರಾಳ-18 |
| 21 | ಬೀಳಗಿ | -- | ಬೀಳಗಿ-1 |
| 22 | ಬೀಳಗಿ | - | ಬೀಳಗಿ-5 |
| 23 | ಬೀಳಗಿ | - | ಬೀಳಗಿ-11 |
| 24 | ಬೀಳಗಿ | - | ಬೀಳಗಿ-13 |
| 25 | ಬೀಳಗಿ | - | ಬೀಳಗಿ-15 |
| 26 | ಬೀಳಗಿ | - | ಬೀಳಗಿ-20 |
| 27 | ಬೀಳಗಿ | - | ಬೀಳಗಿ-21 |

|  |  |  |  |
| --- | --- | --- | --- |
| 28 | ಬಾದಾಮಿ | ಕೈನಕಟ್ಟಿ | ಜಲಗೇರಿ ಎಲ್.ಟಿ |
| 29 |  |  | ಮತ್ತಿಕಟ್ಟಿ |
| 30 |  |  | ಹೊಲಗೇರಿ–2 |
| 31 |  |  | ಹೊಲಗೇರಿ–3 |
| 32 | ಬಾಗಲಕೋಟೆ | – | ಗದ್ದನಕೇರಿ ಎಲ್.ಟಿ |
| 33 |  |  | ಗದ್ದನಕೇರಿ |
| 34 |  |  | ಕಳಸಕೊಪ್ಪ |
| 35 |  |  | ತುಳಸಿಗೇರಿ |
| 36 |  | ಬಳ್ಳೂರು ಆರ್.ಸಿ (ಈ ಕೇಂದ್ರಕ್ಕೆ ಸಹಾಯಕಿಯಿಂದ ಮುಂಬಡ್ತಿ ನೀಡಲು ಪ್ರಸ್ತಾವನೆ ಸ್ವೀಕೃತವಾಗಿದೆ) |  |
| 37 |  | ಸುನಗ (ಅನುಕಂಪದ ಆಧಾರದ ಮೇಲೆ ನೇಮಕಾತಿ ಮಾಡಬೇಕಾಗಿದೆ) |  |

ವಿಧಾನ ಸಭಾ ಸದಸ್ಯರಾದ ಶ್ರೀ ಮುರುಗೇಶ್ ರುದ್ರಪ್ಪ ನಿರಾಣಿ ಇವರ ಚುಕ್ಕೆ ಗುರುತಿಲ್ಲದ
ಪ್ರಶ್ನೆ ಸಂ:522 ಕ್ಕೆ ಅನುಬಂಧ -2

| ತಾಲ್ಲೂಕಿನ ಹೆಸರು | ಅಂಗನವಾಡಿ ಕಾರ್ಯಕರ್ತೆ | ಅಂಗನವಾಡಿ ಸಹಾಯಕಿ |
|---|---|---|
| ಬೀಳಗಿ | - | ಯತ್ನಟ್ಟಿ |
| | | ಹೆರಕಲ್ |
| | | ಗಲಗಲಿ |
| | | ಬಾಡಗಿ |
| | | ಬಾಡಗಂಡಿ |
| | | ಕಡಪಟ್ಟಿ |
| | | ಮುಂಡಗನೂರು |
| ಬಾದಾಮಿ | ಬೆಳ್ಳಿಕಿಂಡಿ | ಗಂಗನಬೂದಿಹಾಳ |
| | | ಜಲಗೇರಿ |
| | | ಕಗಲಗೊಂಬಾ |
| ಬಾಗಲಕೋಟ | ಕಲಾದಗಿ-4 | ಕಲಾದಗಿ-11 |
| | ಕಲಾದಗಿ-6 | ಕಲಾದಗಿ-7 |
| | ಕಲಾದಗಿ-7 | ಸುಕನಾದಗಿ-4 |
| | ಚಿಕ್ಕಸೇಲಿಕೇರಿ | ಚಿಕ್ಕಸಂಶಿ-1 |
| | - | ಹಿರೇಸಂಶಿ-1 |
| | - | ಯಡಹಳ್ಳಿ-4 |
| | - | ನಕ್ಕರಗುಂದಿ ಆರ್.ಸಿ |

ಸಂಖ್ಯೆ:ಆರ್‌ಡಿ 14 ಎಲ್‌ಜಿಎ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ:11.02.2019.

135
415
11/2/19

ಇವರಿಂದ,
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಕಂದಾಯ ಇಲಾಖೆ,
ಬೆಂಗಳೂರು.

ಇವರಿಗೆ,
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

ವಿಷಯ: ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ರಾಜೇಶ್ ನಾಯಕ್.ಯು (ಬಂಟ್ವಾಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:466ಕ್ಕೆ ಉತ್ತರ ಒದಗಿಸುವ ಬಗ್ಗೆ..

* * *

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ರಾಜೇಶ್ ನಾಯಕ್.ಯು (ಬಂಟ್ವಾಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:466ರ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ

Vimalamma C 11/2/19
(ವಿಮಲಮ್ಮ.ಸಿ)
ಶಾಖಾಧಿಕಾರಿ,
ಕಂದಾಯ ಇಲಾಖೆ (ಭೂ ಮಂಜೂರಾತಿ-2).

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 466 |
| ಸದಸ್ಯರ ಹೆಸರು | : | ಶ್ರೀ ರಾಜೇಶ್ ನಾಯಕ್.ಯು. (ಬಂಟ್ವಾಳ) |
| ಉತ್ತರಿಸುವ ದಿನಾಂಕ | : | 11.02.2019 |
| ಉತ್ತರಿಸುವ ಸಚಿವರು | : | ಕಂದಾಯ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 94ಸಿ ಮತ್ತು 94ಸಿಸಿ ಅಡಿಯಲ್ಲಿ ಬಂದಿರುವ ಅರ್ಜಿಗಳು ಎಷ್ಟು; (ವಿಧಾನಸಭಾ ಕ್ಷೇತ್ರವಾರು ವಿವರ ಒದಗಿಸುವುದು) | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 94ಸಿ ಮತ್ತು 94ಸಿಸಿ ಅಡಿಯಲ್ಲಿ ಬಂದಿರುವ ಅರ್ಜಿಗಳ ವಿವರಗಳು ಈ ಕೆಳಕಂಡಂತಿವೆ: |

| ಕ್ರಮ ಸಂಖ್ಯೆ | ವಿಧಾನಸಭಾ ಕ್ಷೇತ್ರ | 94ಸಿ | 94ಸಿಸಿ |
|---|---|---|---|
| 1 | ಮಂಗಳೂರು | 5904 | 9729 |
| 2 | ಮಂಗಳೂರು ನಗರ (ಉತ್ತರ) | 2758 | 7803 |
| 3 | ಮಂಗಳೂರು ನಗರ (ದಕ್ಷಿಣ) | 2596 | 3460 |
| 4 | ಬಂಟ್ವಾಳ | 17196 | 4855 |
| 5 | ಮೂಡಬಿದ್ರೆ | 5212 | 7887 |
| 6 | ಪುತ್ತೂರು | 17818 | 3416 |
| 7 | ಬೆಳ್ತಂಗಡಿ | 32556 | 689 |
| 8 | ಸುಳ್ಯ | 21095 | 989 |
| | **ಒಟ್ಟು** | **105135** | **38828** |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಈ ಪೈಕಿ ಇತ್ಯರ್ಥಗೊಳಿಸಿ ಹಕ್ಕುಪತ್ರ ವಿತರಿಸಿರುವ ಪ್ರಕರಣಗಳು ಎಷ್ಟು; | ಸ್ವೀಕೃತ ಅರ್ಜಿಗಳ ಪೈಕಿ ಇತ್ಯರ್ಥಗೊಳಿಸಿ ಹಕ್ಕುಪತ್ರ ವಿತರಿಸಿರುವ ಪ್ರಕರಣಗಳ ಸಂಖ್ಯೆ ಈ ಕೆಳಕಂಡಂತಿವೆ: |

| ಕ್ರಮ ಸಂಖ್ಯೆ | ವಿಧಾನಸಭಾ ಕ್ಷೇತ್ರ | ಇತ್ಯರ್ಥಪಡಿಸಿರುವ ಪ್ರಕರಣಗಳ ಸಂಖ್ಯೆ | | ಹಕ್ಕುಪತ್ರ ವಿತರಿಸಿರುವ ಪ್ರಕರಣಗಳ ಸಂಖ್ಯೆ | |
|---|---|---|---|---|---|
| | | 94ಸಿ | 94ಸಿಸಿ | 94ಸಿ | 94ಸಿಸಿ |
| 1 | ಮಂಗಳೂರು | 1901 | 6683 | 0 | 5110 |
| 2 | ಮಂಗಳೂರು ನಗರ (ಉತ್ತರ) | 152 | 3318 | 134 | 3180 |
| 3 | ಮಂಗಳೂರು ನಗರ (ದಕ್ಷಿಣ) | 0 | 1598 | 0 | 1585 |
| 4 | ಬಂಟ್ವಾಳ | 8349 | 3521 | 12501 | 4398 |
| 5 | ಮೂಡಬಿದ್ರೆ | 360 | 2890 | 360 | 3927 |
| 6 | ಪುತ್ತೂರು | 10584 | 1575 | 8125 | 955 |
| 7 | ಬೆಳ್ತಂಗಡಿ | 14132 | 237 | 13629 | 221 |
| 8 | ಸುಳ್ಯ | 10866 | 211 | 10452 | 207 |
| | ಒಟ್ಟು | **46344** | **20033** | **45201** | **19583** |

**ಇ)** ತಿರಸ್ಕೃತವಾಗಿರುವ ಪ್ರಕರಣಗಳು ಎಷ್ಟು; ತಿರಸ್ಕೃತಗೊಳ್ಳಲು ಕಾರಣವೇನು;

ತಿರಸ್ಕೃತವಾಗಿರುವ ಪ್ರಕರಣಗಳ ವಿವರಗಳು ಈ ಕೆಳಕಂಡಂತಿವೆ:

| ಕ್ರಮ ಸಂಖ್ಯೆ | ವಿಧಾನಸಭಾ ಕ್ಷೇತ್ರ | 94ಸಿ | 94ಸಿಸಿ |
|---|---|---|---|
| 1 | ಮಂಗಳೂರು | 3644 | 2935 |
| 2 | ಮಂಗಳೂರು ನಗರ (ಉತ್ತರ) | 2371 | 2241 |
| 3 | ಮಂಗಳೂರು ನಗರ (ದಕ್ಷಿಣ) | 1897 | 1466 |
| 4 | ಬಂಟ್ವಾಳ | 6864 | 902 |
| 5 | ಮೂಡಬಿದ್ರೆ | 5894 | 2261 |
| 6 | ಪುತ್ತೂರು | 7100 | 1197 |
| 7 | ಬೆಳ್ತಂಗಡಿ | 13251 | 232 |
| 8 | ಸುಳ್ಯ | 9267 | 679 |
| | **ಒಟ್ಟು** | **50288** | **11913** |

ಸರ್ಕಾರಿ ಜಾಗದಲ್ಲಿ ಮನೆ ನಿರ್ಮಿಸದಿರುವುದು, ಮನೆಯನ್ನು cut-off date ನ ನಂತರ ನಿರ್ಮಿಸಿರುವುದು, ಖಾಲಿ ಸ್ಥಳಕ್ಕೆ ಅರ್ಜಿ ಸಲ್ಲಿಸಿರುವುದು, ಮೀಸಲು ಅರಣ್ಯ, ಪೊರಂಬೋಕು, ರಸ್ತೆ ಮಾರ್ಜಿನ್ ಇತ್ಯಾದಿ ಕಾರಣಗಳಿಂದಾಗಿ ಅರ್ಜಿಗಳನ್ನು ತಿರಸ್ಕರಿಸಲಾಗಿರುತ್ತದೆ.

**ಈ)** ಬಾಕಿ ಇರುವ ಅರ್ಜಿಗಳು ಎಷ್ಟು; ಯಾವ ಕಾಲಮಿತಿಯಲ್ಲಿ ಇತ್ಯರ್ಥಪಡಿಸಿ ಹಕ್ಕುಪತ್ರ ವಿತರಿಸಲಾಗುವುದು? (ವಿವರ ನೀಡುವುದು)

ಬಾಕಿ ಇರುವ ಪ್ರಕರಣಗಳ ವಿವರಗಳು ಈ ಕೆಳಕಂಡಂತಿವೆ:

| ಕ್ರಮ ಸಂಖ್ಯೆ | ವಿಧಾನಸಭಾ ಕ್ಷೇತ್ರ | 94ಸಿ | 94ಸಿಸಿ |
|---|---|---|---|
| 1 | ಮಂಗಳೂರು | 122 | 1111 |
| 2 | ಮಂಗಳೂರು ನಗರ (ಉತ್ತರ) | 0 | 2343 |
| 3 | ಮಂಗಳೂರು ನಗರ (ದಕ್ಷಿಣ) | 0 | 396 |
| 4 | ಬಂಟ್ವಾಳ | 904 | 432 |
| 5 | ಮೂಡಬಿದ್ರೆ | 179 | 1637 |
| 6 | ಪುತ್ತೂರು | 1163 | 644 |
| 7 | ಬೆಳ್ತಂಗಡಿ | 5173 | 220 |
| 8 | ಸುಳ್ಯ | 962 | 99 |
| | **ಒಟ್ಟು** | **8503** | **6882** |

ಇತ್ಯರ್ಥಕ್ಕೆ ಬಾಕಿ ಇರುವ ಅರ್ಜಿಗಳು ತನಿಖಾ ಹಂತದಲ್ಲಿದ್ದು, ಅವುಗಳನ್ನು ಶೀಘ್ರವಾಗಿ ಇತ್ಯರ್ಥಪಡಿಸಿ, ವಿಲೇವಾರಿ ಮಾಡಲು ಜಿಲ್ಲೆಯ ಎಲ್ಲಾ ತಹಶೀಲ್ದಾರ್‌ಗಳಿಗೆ ನಿರ್ದೇಶನ ನೀಡಲಾಗಿದೆ.

**ಆರ್‌ಡಿ 14 ಎಲ್‌ಜಿಎ 2019**

**ಆರ್.ವಿ.ದೇಶಪಾಂಡೆ**
ಕಂದಾಯ ಸಚಿವರು.

ಕರ್ನಾಟಕ ಸರ್ಕಾರ

**ಸಂಖ್ಯೆ:** ಅಪಜೀ 13 ಎಫ್‌ಎಎಫ್ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಡಾ. ಬಿ.ಆರ್.ಅಂಬೇಡ್ಕರ್ ವೀಧಿ
ಬೆಂಗಳೂರು, ದಿನಾಂಕ:08.02.2019.

129
GS
11/02/19

**ಇಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ,
ಬಹುಮಹಡಿಗಳ ಕಟ್ಟಡ,
**ಬೆಂಗಳೂರು.**

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
**ಬೆಂಗಳೂರು.**

**ಮಾನ್ಯರೆ,**

**ವಿಷಯ:** ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ರಘುಪತಿ ಭಟ್ ಕೆ (ಉಡುಪಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 445ಕ್ಕೆ ಉತ್ತರಿಸುವ ಕುರಿತು.

**ಉಲ್ಲೇಖ:** ತಮ್ಮ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/3ಅ/ಪ್ರ.ಸಂ.445 /2019 ದಿನಾಂಕ: 04.02.2019.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ರಘುಪತಿ ಭಟ್ ಕೆ (ಉಡುಪಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 445ಕ್ಕೆ ಸಂಬಂಧಿಸಿದಂತೆ, ಕನ್ನಡ ಭಾಷೆಯಲ್ಲಿ 150 ಉತ್ತರದ ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ನಿಮ್ಮ ನಂಬುಗೆಯ,
B. J. Jwalakumari
(ಬಿ.ಜೆ.ಜ್ವಾಲಾಕುಮಾರಿ) 8/2/19
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ

# ಕರ್ನಾಟಕ ವಿಧಾನ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | [illegible] |
| ಸದಸ್ಯರ ಹೆಸರು | : | ಶ್ರೀ ರಘುಪತಿ ಭಟ್ ಕೆ. (ಉಡುಪಿ) |
| ಉತ್ತರಿಸಬೇಕಾದ ದಿನಾಂಕ | : | 11.02.2019 |
| ಉತ್ತರಿಸುವವರು | : | ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಈಗಾಗಲೇ ಡೀಮ್ಡ್ ಫಾರೆಸ್ಟ್ ಎಂದು ತಪ್ಪಾಗಿ ನಮೂದಿಸಲಾಗಿರುವ ಜಾಗಗಳನ್ನು ವಿರಹಿತಗೊಳಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; | ಮಾನ್ಯ ಸರ್ವೋಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 202/1995 ರಲ್ಲಿ ನೀಡಿರುವ ದಿನಾಂಕ:12.2.1996 ರ ಆದೇಶದನ್ವಯ ಡೀಮ್ಡ್ ಫಾರೆಸ್ಟ್ ಪ್ರದೇಶಗಳನ್ನು ಗುರುತಿಸಲು ಸೂಚಿಸಿರುವ ಮೇರೆಗೆ ಸರ್ಕಾರದ ಆದೇಶ ಸಂಖ್ಯೆ: ಎಫ್‌ಇಇ 185 ಎಫ್‌ಎಎಫ್ 2011 ಬೆಂಗಳೂರು ದಿನಾಂಕ:15.05.2014ರಲ್ಲಿ ಯಾವ ಪ್ರದೇಶಗಳನ್ನು ಡೀಮ್ಡ್ ಫಾರೆಸ್ಟ್ ಫಾರೆಸ್ಟ್ ಪಟ್ಟಿಯಲ್ಲಿ ಸೇರ್ಪಡೆ ಮಾಡಬೇಕು ಎನ್ನುವುದರ ಬಗ್ಗೆ ಪೂರ್ಣ ನಿರ್ಧರಿತ ಕ್ಷೇತ್ರೀಯ ಮಾನದಂಡಗಳನ್ನು (well defined pre-determined field criteria) ನಿರ್ಧರಿಸಲಾಗಿದೆ. ಸದರಿ ಸರ್ಕಾರಿ ಆದೇಶದನ್ವಯ ಆಯಾ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ಜಿಲ್ಲಾ ಮಟ್ಟದ ಸಮಿತಿಗಳು ಸಲ್ಲಿಸಿದ ಪಟ್ಟಿಯ ಆಧಾರದ ಮೇಲೆ ರಾಜ್ಯದಲ್ಲಿನ ಪರಿಭಾವಿತ ಅರಣ್ಯ ಪ್ರದೇಶಗಳ ಅಂತಿಮ ಪಟ್ಟಿಗೆ ಸಚಿವ ಸಂಪುಟದ ಅನುಮೋದನೆ ಪಡೆಯಲಾಗಿರುತ್ತದೆ. ಸಚಿವ ಸಂಪುಟದ ಅನುಮೋದನೆಯನ್ವಯ ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಅಫಿಡವಿಟ್ ಸಲ್ಲಿಸಲು ಕ್ರಮವಹಿಸಲಾಗುತ್ತಿದೆ. ಅಫಿಡವಿಟ್ ಸಲ್ಲಿಕೆಯ ನಂತರ ಮಾನ್ಯ ಸರ್ವೋಚ್ಚ ನ್ಯಾಯಾಲಯವು ನೀಡುವ ನಿರ್ದೇಶನದಂತೆ ಪಟ್ಟಿಯು ಅಂತಿಮವಾಗುತ್ತದೆ. |
| ಆ) | ಉಡುಪಿ ಜಿಲ್ಲೆಯಲ್ಲಿ ಎಷ್ಟು ಮತ್ತು ಯಾವ ಪ್ರದೇಶಗಳನ್ನು ಡೀಮ್ಡ್ ಫಾರೆಸ್ಟ್ ಎಂದು ವಿರಹಿತಗೊಳಿಸಲಾಗಿದೆ? (ಸಂಪೂರ್ಣ ವಿವರ ನೀಡುವುದು) | ಉಡುಪಿ ಜಿಲ್ಲೆಗೆ ಸಂಬಂಧಿಸಿದಂತೆ ಜಿಲ್ಲಾ ಮಟ್ಟದ ಸಮಿತಿಯ ವರದಿಯನ್ವಯ ಡೀಮ್ಡ್ ಫಾರೆಸ್ಟ್ ವ್ಯಾಪ್ತಿಗೆ ಬಾರದ ಎಲ್ಲಾ ಪ್ರದೇಶಗಳನ್ನು ಹೊರತು ಪಡಿಸಿ ಅಂತಿಮವಾಗಿ 10769.02 ಹೆಕ್ಟೇರ್ ಪ್ರದೇಶವನ್ನು ಗುರುತಿಸಲಾಗಿರುತ್ತದೆ. ಸದರಿ 10769.02 ಹೆಕ್ಟೇರ್ ಪ್ರದೇಶವು ರಾಜ್ಯದ ಒಟ್ಟಾರೆ ಡೀಮ್ಡ್ ಫಾರೆಸ್ಟ್ ವ್ಯಾಪ್ತಿಗೆ ಬರುವ 3,30,185.74 ಹೆಕ್ಟೇರ್ ಪ್ರದೇಶದ ಭಾಗವಾಗಿರುತ್ತದೆ. ಉಡುಪಿ ಜಿಲ್ಲೆಗೆ ಸಂಬಂಧಿಸಿದಂತೆ 34918.20 ಹೆಕ್ಟೇರ್ ಡೀಮ್ಡ್ ಫಾರೆಸ್ಟ್ ಪ್ರದೇಶವನ್ನು ವಿರಹಿತಗೊಳಿಸಲು ಜಿಲ್ಲಾ ಸಮಿತಿ ಶಿಫಾರಸ್ಸು ಮಾಡಿದ್ದು, ಈ ವಿಷಯವು ಮೇಲೆ ತಿಳಿಸಿದಂತೆ ಮಾನ್ಯ ಸರ್ವೋಚ್ಚ ನ್ಯಾಯಾಲಯ ನೀಡಬಹುದಾದ ನಿರ್ದೇಶನವನ್ನು ಅವಲಂಬಿಸುತ್ತದೆ. |

ಸಂಖ್ಯೆ: ಅಪಜೀ 13 ಎಫ್‌ಎಎಫ್ 2019

(ಸತೀಶ್ ಜಾರಕಿಹೊಳಿ)
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು

ಕರ್ನಾಟಕ ಸರ್ಕಾರ

ಸಂ.ಯುಸಕ್ರೀ 12 ಯುಸೇಭಾ 2018

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ
ಬೆಂಗಳೂರು, ದಿನಾಂಕ: 11 .02.2019.

ಇವರಿಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ,
ಬೆಂಗಳೂರು.

ಗೆ:
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಶಿವಣ್ಣ ಬಿ. (ಆನೇಕಲ್) ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:246ಕ್ಕೆ ಉತ್ತರ ನೀಡುವ ಬಗ್ಗೆ.

*****

ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಶಿವಣ್ಣ ಬಿ. (ಆನೇಕಲ್) ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 246ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ.

ನಿಮ್ಮ ನಂಬುಗೆಯ,

(ಗಿರಿಜಾ ಪಾಟೀಲ)
ಪೀಠಾಧಿಕಾರಿ (ಪ್ರ),
ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ.

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 246

ಉತ್ತರಿಸುವ ದಿನಾಂಕ : 11.02.2019

ಸದಸ್ಯರ ಹೆಸರು : ಶ್ರೀ ಶಿವಣ್ಣ ಬಿ. (ಆನೇಕಲ್)

ಉತ್ತರಿಸುವ ಸಚಿವರು : ಮಾನ್ಯ ಯುವ ಸಬಲೀಕರಣ ಹಾಗೂ ಕ್ರೀಡಾ ಸಚಿವರು.

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ) | 2017-18 ರಲ್ಲಿ ಆನೇಕಲ್ ತಾಲ್ಲೂಕು ಕ್ರೀಡಾಂಗಣಕ್ಕೆ ಹೆಚ್ಚುವರಿ ಕಾಮಗಾರಿಗಳು ಅನುಮೋದನೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಪೂರ್ಣ ಮಾಹಿತಿ ನೀಡುವುದು) | ಹೌದು<br><br>ಸರ್ಕಾರದ ಆದೇಶ ಸಂಖ್ಯೆ: ಯುಸೇಇ 335 ಯುಸೇಕ್ರೀ 2016, ದಿನಾಂಕ: 14-02-2017 ರನ್ವಯ ಬೆಂಗಳೂರು ನಗರ ಜಿಲ್ಲೆ ಆನೇಕಲ್ ತಾಲ್ಲೂಕು ಕ್ರೀಡಾಂಗಣದಲ್ಲಿ ರೂ 489.56 ಲಕ್ಷಗಳ ಅಂದಾಜು ವೆಚ್ಚದಲ್ಲಿ ಹೆಚ್ಚುವರಿ ಕಾಮಗಾರಿಗಳನ್ನು ಕೈಗೊಳ್ಳಲು ಸರ್ಕಾರದ ತಾತ್ವಿಕ ಅನುಮೋದನೆ ನೀಡಲಾಗಿದೆ. |
| ಆ) | ಈ ಕ್ರೀಡಾಂಗಣದಲ್ಲಿ ಹೆಚ್ಚುವರಿ ಕಾಮಗಾರಿಗಳನ್ನು ಕೈಗೊಳ್ಳಲು 489.56 ಲಕ್ಷ ರೂಗಳ ಅನುಮೋದನೆಯಾಗಿದ್ದರೂ ಇದುವರೆವಿಗೂ ಕಾಮಗಾರಿ ಆರಂಭವಾಗದಿರಲು ಕಾರಣಗಳೇನು; | ಅನುದಾನದ ಕೊರತೆ ಹಿನ್ನೆಲೆಯಲ್ಲಿ ರೂ 489.56 ಲಕ್ಷ ವೆಚ್ಚದ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಸಾಧ್ಯವಾಗಿರುವುದಿಲ್ಲ. |
| ಇ) | ಈ ಕಾಮಗಾರಿಗಳನ್ನು ಯಾವಾಗ ಆರಂಭಿಸಲಾಗುವುದು? (ಪೂರ್ಣ ಮಾಹಿತಿ ನೀಡುವುದು) | 2018-19 ನೇ ಸಾಲಿನಲ್ಲಿ ಒಟ್ಟು ರೂ 50.00 ಲಕ್ಷ ಮೊತ್ತದಲ್ಲಿ ವಿದ್ಯುದೀಕರಣ, ನೀರು ಸರಬರಾಜು, ನೈರ್ಮಲೀಕರಣ, ಸುಣ್ಣ-ಬಣ್ಣ ಬಳೆಯುವುದು ಮತ್ತು ಕ್ರೀಡಾ ಅಂಕಣಗಳನ್ನು ಅಭಿವೃದ್ಧಿಪಡಿಸುವುದು ಸೇರಿದಂತೆ ವಿವಿಧ ತುರ್ತು ಕಾಮಗಾರಿಗಳನ್ನು ಕೈಗೊಳ್ಳಲು ಮಂಜೂರಾತಿ ನೀಡಲಾಗಿದ್ದು, ಪ್ರಸ್ತುತ ರೂ.20.00 ಲಕ್ಷಗಳನ್ನು ಹಂಚಿಕೆ ಮಾಡಲಾಗಿದೆ. ಅನುದಾನದ ಲಭ್ಯತೆ ಆಧರಿಸಿ ಇತರೆ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುವುದು. |

ಸಂಖ್ಯೆ: ಯುಸಕ್ರೀ 12 ಯುಸೇಭಾ 2019.

(ರಹೀಂ ಖಾನ್)
ಯುವ ಸಬಲೀಕರಣ ಹಾಗೂ ಕ್ರೀಡಾ ಸಚಿವರು.

**ಕರ್ನಾಟಕ ಸರ್ಕಾರ**

ಸಂಖ್ಯೆ: ಕಾಇ 43 ಎಲ್ಇಟಿ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 08.02.2019

ಇವರಿಂದ:
ಸರ್ಕಾರದ ಕಾರ್ಯದರ್ಶಿಗಳು,
ಕಾರ್ಮಿಕ ಇಲಾಖೆ,
ವಿಕಾಸಸೌಧ, ಬೆಂಗಳೂರು.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಬಸನಗೌಡ ದದ್ದಲ್ (ರಾಯಚೂರು ಗ್ರಾಮಾಂತರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 342ಕ್ಕೆ ಉತ್ತರಿಸುವ ಕುರಿತು.

*******.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಬಸನಗೌಡ ದದ್ದಲ್ (ರಾಯಚೂರು ಗ್ರಾಮಾಂತರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 342ಕ್ಕೆ ಉತ್ತರಿಸುವ ಕುರಿತು ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,
(ಜಿ.ಎಲ್. ಸಿದ್ಧರಾಜು)
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

ಪ್ರತಿಯನ್ನು ಮಾಹಿತಿಗಾಗಿ:

1. ಮಾನ್ಯ ಕಾರ್ಮಿಕ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು
3. ಸರ್ಕಾರದ ಉಪ ಕಾರ್ಯದರ್ಶಿ ರವರ ಆಪ್ತ ಶಾಖೆ, ಕಾರ್ಮಿಕ ಇಲಾಖೆ, ವಿಕಾಸ ಸೌಧ.
4. ಸರ್ಕಾರದ ಉಪ ಕಾರ್ಯದರ್ಶಿರವರ ಆಪ್ತ ಸಹಾಯಕರು,(ಸಮನ್ವಯ) ಕಾರ್ಮಿಕ ಇಲಾಖೆ,
5. ಪೀಠಾಧಿಕಾರಿ-7, ಸ್ವೀಮರ ಶಾಖೆ, ಕಾರ್ಮಿಕ ಇಲಾಖೆ, ವಿಕಾಸ ಸೌಧ.

# ಕರ್ನಾಟಕ ವಿಧಾನ ಸಭೆ

| | | |
|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 342 |
| 2. | ಮಾನ್ಯ ಸದಸ್ಯರ ಹೆಸರು | ಶ್ರೀ ಬಸವನಗೌಡ ದದ್ದಲ್ (ರಾಯಚೂರು ಗ್ರಾಮಾಂತರ) |
| 3. | ಉತ್ತರಿಸಬೇಕಾದ ದಿನಾಂಕ | 11/02/2019 |
| 4. | ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಪ್ರಶ್ನೆ ಕ್ರ.ಸಂ | ಪ್ರಶ್ನೆ | ಉತ್ತರಗಳು |
|---|---|---|
| ಅ) | ರಾಜ್ಯದಲ್ಲಿ ಈವರೆಗೆ ಎಷ್ಟು ಕಾರ್ಮಿಕ ಭವನಗಳನ್ನು ನಿರ್ಮಿಸಲಾಗಿದೆ (ಜಿಲ್ಲಾವಾರು ಮಾಹಿತಿ ಒದಗಿಸುವುದು) | ಕಲ್ಬುರ್ಗಿ, ಬೆಳಗಾವಿ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಕಾರ್ಮಿಕ ಭವನಗಳನ್ನು ನಿರ್ಮಿಸಲಾಗಿರುತ್ತದೆ |
| ಆ) | ಹೈದರಾಬಾದ್ ಕರ್ನಾಟಕ ಪ್ರದೇಶ ವ್ಯಾಪ್ತಿಯ ಕಾರ್ಮಿಕರ ಸ್ಥಿತಿಗತಿಗಳ ಬಗ್ಗೆ ಸರ್ಕಾರ ಮಾಹಿತಿ ಸಂಗ್ರಹಿಸಿದೆಯೇ/ (ವಿವರ ನೀಡುವುದು) | ಕಾರ್ಮಿಕ ಇಲಾಖಾ ವತಿಯಿಂದ ಹೈದರಾಬಾದ್-ಕರ್ನಾಟಕ ಪ್ರದೇಶದ ವ್ಯಾಪ್ತಿಯ ಕಾರ್ಮಿಕರ ಸ್ಥಿತಿಗತಿ ಬಗ್ಗೆ ಯಾವುದೇ ಮಾಹಿತಿ ಸಂಗ್ರಹಿಸಿರುವುದಿಲ್ಲ. |
| ಇ) | ರಾಯಚೂರು ಗ್ರಾಮೀಣ ಕ್ಷೇತ್ರದಲ್ಲಿ ಕಾರ್ಮಿಕ ಭವನ ನಿರ್ಮಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? ಹಾಗಿದ್ದಲ್ಲಿ ಯಾವಾಗ ಪ್ರಾರಂಭಿಸಲಾಗುವುದು? | ರಾಯಚೂರು ಗ್ರಾಮೀಣ ಕ್ಷೇತ್ರದಲ್ಲಿ ಕಾರ್ಮಿಕ ಭವನ ನಿರ್ಮಿಸುವ ಪ್ರಸ್ತಾವನೆ ಪ್ರಸ್ತುತ ಇರುವುದಿಲ್ಲ. |

ಕಾಇ 43 ಎಲ್‌ಇಟಿ 2019

(ವೆಂಕಟರಮಣಪ್ಪ)
ಕಾರ್ಮಿಕ ಸಚಿವರು.

# ಕರ್ನಾಟಕ ಸರ್ಕಾರ

**ಸಂ:ಕಂಇ 09 ಭೂದಾಪು 2019**

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ: 08.02.2019

**ಇಂದ:**

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಕಂದಾಯ ಇಲಾಖೆ,
ಬೆಂಗಳೂರು.

**ಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಲಾಲಾಜಿ ಆರ್.ಮೆಂಡನ್ (ಕಾಪು) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 730 ಕ್ಕೆ ಉತ್ತರಿಸುವ ಕುರಿತು.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಲಾಲಾಜಿ ಆರ್.ಮೆಂಡನ್ (ಕಾಪು) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 730 ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

(ಸಿ.ಪುಟ್ಟನಂಜಯ್ಯ)
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಮಾಪನ)

# ಕರ್ನಾಟಕ ವಿಧಾನಸಭೆ

| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 730 |
|---|---|---|
| 2 | ಸದಸ್ಯರ ಹೆಸರು | ಶ್ರೀ ಲಾಲಾಜಿ ಆರ್.ಮೆಂಡನ್ (ಕಾಪು) |
| 3 | ಉತ್ತರಿಸಬೇಕಾದ ದಿನಾಂಕ | 11.02.2019 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಉಡುಪಿ ಜಿಲ್ಲೆಯ ಕಾಪುವನ್ನು ಹೊಸದಾಗಿ ತಾಲ್ಲೂಕು ಕೇಂದ್ರವನ್ನಾಗಿ ಘೋಷಿಸಿದ್ದು, ಇಲ್ಲಿಯವರೆಗೂ ಆಡಳಿತ ಕಛೇರಿಗಳನ್ನು ಸ್ಥಳಾಂತರ ಮಾಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ<br>ಉಡುಪಿ ಜಿಲ್ಲೆಯಲ್ಲಿ ಹೊಸದಾಗಿ ರಚನೆಯಾಗಿರುವ ಕಾಪು ತಾಲ್ಲೂಕಿನಲ್ಲಿ ಕಂದಾಯ ಇಲಾಖೆಯ ವತಿಯಿಂದ ತಾಲ್ಲೂಕು ಕಛೇರಿಯನ್ನು ಮತ್ತು ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿಯನ್ನು ತೆರೆಯಲಾಗಿದೆ. ಇತರೆ ಇಲಾಖೆಗಳ ತಾಲ್ಲೂಕು ಮಟ್ಟದ ಕಛೇರಿಗಳನ್ನು ಸಂಬಂಧ ಪಟ್ಟ ಇಲಾಖೆಗಳು ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹಂತಹಂತವಾಗಿ ತೆರೆಯಲು ಅನುಮತಿ ನೀಡಲಾಗಿದೆ.<br>ಅದರಂತೆ ಹೊಸ ತಾಲ್ಲೂಕು ಕೇಂದ್ರದಲ್ಲಿ 14 ಪ್ರಮುಖ ಇಲಾಖೆಗಳ ತಾಲ್ಲೂಕು ಮಟ್ಟದ ಕಚೇರಿಗಳನ್ನು ಪ್ರಾರಂಭಿಸಲು ತುರ್ತಾಗಿ ಕ್ರಮಕೈಗೊಳ್ಳುವಂತೆ ಸಂಬಂಧಪಟ್ಟ ಇಲಾಖೆಗಳನ್ನು ಈಗಾಗಲೇ ಕೋರಲಾಗಿದ್ದು, ಈ ಬಗ್ಗೆ ಕ್ರಮವಹಿಸಲಾಗುತ್ತಿದೆ. |
| ಆ) | ಬಂದಿದ್ದಲ್ಲಿ, ಯಾವಾಗ ಆಡಳಿತ ಕಛೇರಿಗಳನ್ನು ಸ್ಥಳಾಂತರ ಮಾಡಿ ಪ್ರಾರಂಭಿಸಲಾಗುವುದು? (ಸಂಪೂರ್ಣ ವಿವರ ನೀಡುವುದು) | |

ಕಂಇ 09 ಭೂದಾಮ 2019

(ಆರ್.ವಿ. ದೇಶಪಾಂಡೆ)
ಕಂದಾಯ ಸಚಿವರು

## ಕರ್ನಾಟಕ ಸರ್ಕಾರ

ಸಂ:ಕಂಇ 11 ಎಜೆಎಸ್ 2019

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ:08.02.2019

ಇಂದ:

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಕಂದಾಯ ಇಲಾಖೆ,
ಬೆಂಗಳೂರು.

ಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ**: ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಸುರೇಶ್ ಡಿ.ಎಸ್. (ತರಿಕೆರೆ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:81 ಕ್ಕೆ ಉತ್ತರಿಸುವ ಕುರಿತು.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಸುರೇಶ್ ಡಿ.ಎಸ್. (ತರಿಕೆರೆ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:81 ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

**(ಸಿ.ಮುಟ್ಟನಂಜಯ್ಯ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಮಾಪನ)

# ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 81 |
| 2 | ಸದಸ್ಯರ ಹೆಸರು | ಶ್ರೀ ಸುರೇಶ್ ಡಿ.ಎಸ್.(ತರೀಕೆರೆ) |
| 3 | ಉತ್ತರಿಸಬೇಕಾದ ದಿನಾಂಕ | 11.02.2019 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ತರೀಕೆರೆ ತಾಲ್ಲೂಕು ಕಛೇರಿ ಮತ್ತು ಅಟಲ್ ಜೀ ಜನಸ್ನೇಹಿ ಕೇಂದ್ರದ ನಾಡ ಕಛೇರಿಗಳ ಆನ್ ಲೈನ್ ತಂತ್ರಾಂಶದಲ್ಲಿ ಶೈವಾರೆಡ್ಡಿ, ಬ್ರಾಹ್ಮಣ, ಮೊದಲಿಯಾರ್, ತಮಿಳುಗೌಂಡರ್,ನಾಯರ್, ಶ್ವೇತಾಂಬರ, ದಿಗಂಬರ, ಆರ್ಯವೈಶ್ಯ ಜಾತಿಗಳ ಹೆಸರುಗಳನ್ನು ಜಾತಿ ಪ್ರಮಾಣ ಪತ್ರದಲ್ಲಿ ನೀಡಲು ಲಭ್ಯವಿಲ್ಲದಿರುವುದರಿಂದ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಆದೇಶದ ಸಂಖ್ಯೆ: ಸಕಇ 225 ಬಿಸಿಎ2000 ದಿನಾಂಕ 30.03.2002ರಲ್ಲಿ ಜಾತಿ ಪಟ್ಟಿಯಲ್ಲಿ ನಮೂದಿತವಾಗಿರುವ ಜಾತಿಯ ಹೆಸರುಗಳನ್ನು ನಾಡಕಛೇರಿ ತಂತ್ರಾಂಶದಲ್ಲಿ ಅಳವಡಿಸಿ ಪ್ರಮಾಣ ಪತ್ರಗಳನ್ನು ವಿತರಿಸಲಾಗುತ್ತಿದೆ. ಆದರೆ ಶೈವಾರೆಡ್ಡಿ, ಬ್ರಾಹ್ಮಣ, ಮೊದಲಿಯಾರ್, ತಮಿಳುಗೌಂಡರ್, ನಾಯರ್, ಶ್ವೇತಾಂಬರ, ದಿಗಂಬರ, ಆರ್ಯವೈಶ್ಯ ಜಾತಿಗಳ ಹೆಸರುಗಳು ಸದರಿ ಜಾತಿ ಪಟ್ಟಿಯಲ್ಲಿ ನಮೂದಾಗದೇ ಇರುವುದರಿಂದ ಸದರಿ ಸಮುದಾಯದವರಿಗೆ ಜಾತಿ ಪ್ರಮಾಣ ಪತ್ರಗಳನ್ನು ನಾಡಕಛೇರಿ ತಂತ್ರಾಂಶದ ಮೂಲಕ ವಿತರಿಸುತ್ತಿರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಸರ್ಕಾರ ಈ ಬಗ್ಗೆ ಯಾವ ಕ್ರಮವನ್ನು ಕೈಗೊಳ್ಳುವುದು? (ವಿವರ ನೀಡುವುದು) | ಅನ್ವಯಿಸುವುದಿಲ್ಲ. |

[illegible]

(ಆರ್. ವಿ. ದೇಶಪಾಂಡೆ)
ಕಂದಾಯ ಸಚಿವರು

**ಕರ್ನಾಟಕ ಸರ್ಕಾರ**

ಸಂಖ್ಯೆ: ಕಾಇ 41 ಎಲ್ಇಟಿ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 08.02.2019

**ಇವರಿಂದ:**
ಸರ್ಕಾರದ ಕಾರ್ಯದರ್ಶಿಗಳು,
ಕಾರ್ಮಿಕ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಸುನಿಲ್ ಬಿಳಿಯ ನಾಯಕ್ (ಭಟ್ಕಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 6ಕ್ಕೆ ಉತ್ತರಿಸುವ ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಸುನಿಲ್ ಬಿಳಿಯ ನಾಯಕ್ (ಭಟ್ಕಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 6ಕ್ಕೆ ಉತ್ತರಿಸುವ ಕುರಿತು ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,
(ಜಿ.ಎಂ. ಸಿದ್ಧರಾಜು)
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

**ಪ್ರತಿಯನ್ನು ಮಾಹಿತಿಗಾಗಿ:**

1. ಮಾನ್ಯ ಕಾರ್ಮಿಕ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು
3. ಸರ್ಕಾರದ ಉಪ ಕಾರ್ಯದರ್ಶಿ ರವರ ಆಪ್ತ ಶಾಖೆ, ಕಾರ್ಮಿಕ ಇಲಾಖೆ, ವಿಕಾಸ ಸೌಧ.
4. ಸರ್ಕಾರದ ಉಪ ಕಾರ್ಯದರ್ಶಿರವರ ಆಪ್ತ ಸಹಾಯಕರು,(ಸಮನ್ವಯ) ಕಾರ್ಮಿಕ ಇಲಾಖೆ,
5. ಪೀಠಾಧಿಕಾರಿ–7, ಸ್ವೀಮರ ಶಾಖೆ, ಕಾರ್ಮಿಕ ಇಲಾಖೆ, ವಿಕಾಸ ಸೌಧ.

# ಕರ್ನಾಟಕ ವಿಧಾನ ಸಭೆ

| | |
|---|---|
| 1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 6 |
| 2. ಮಾನ್ಯ ಸದಸ್ಯರ ಹೆಸರು | ಶ್ರೀ ಸುನಿಲ್ ಬಿಳಿಯ ನಾಯಕ್ (ಭಟ್ಕಳ) |
| 3. ಉತ್ತರಿಸಬೇಕಾದ ದಿನಾಂಕ | 11/02/2019 |
| 4. ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಭಟ್ಕಳ ತಾಲ್ಲೂಕಿನ ಕಾರ್ಮಿಕ ಇಲಾಖೆಯಲ್ಲಿ ಕಳೆದ 4 ವರ್ಷಗಳಿಂದ ಕಾರ್ಮಿಕ ಅಧಿಕಾರಿಯನ್ನು ನೇಮಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; | ಭಟ್ಕಳ ತಾಲ್ಲೂಕಿನಲ್ಲಿ ಕಾರ್ಮಿಕ ಇಲಾಖೆಯ ಕಾರ್ಮಿಕ ನಿರೀಕ್ಷಕರ ಕಛೇರಿ ಕಾರ್ಯನಿರತವಾಗಿದ್ದು, ಈ ಕಛೇರಿಯಲ್ಲಿ ಪ್ರಸ್ತುತ ಕಾರ್ಮಿಕ ನಿರೀಕ್ಷಕರ ಹುದ್ದೆಯು ಖಾಲಿಯಿರುತ್ತದೆ. ಆಡಳಿತಾತ್ಮಕ ಹಿತದೃಷ್ಟಿಯಿಂದ ದಿನಾಂಕ: 20.05.2018 ರಿಂದ ಶ್ರೀ ಸಿದ್ದಪ್ಪ ಖೈನೂರು, ಹಿರಿಯ ಕಾರ್ಮಿಕ ನಿರೀಕ್ಷಕರು, 1ನೇ ವೃತ್ತ, ಹುಬ್ಬಳ್ಳಿ ಇವರನ್ನು ಹೆಚ್ಚುವರಿ ಪ್ರಭಾರದಲ್ಲಿ ಕಾರ್ಯನಿರ್ವಹಿಸಲು ನಿಯೋಜಿಸಲಾಗಿದೆ. |
| ಆ) | ಹಾಗಿದ್ದಲ್ಲಿ ಖಾಲಿ ಇರುವ ಈ ಹುದ್ದೆಯನ್ನು ವರ್ಗಾವಣೆ ಮುಖಾಂತರ ತುಂಬಲು ಯಾವಾಗ ಕ್ರಮ ಕೈಗೊಳ್ಳಲಾಗುವುದು? | ಕಾರ್ಮಿಕ ನಿರೀಕ್ಷಕರ ಖಾಲಿ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ ನಿಯಮಾನುಸಾರ ಸರ್ಕಾರದ ಮೂಲಕ ಕರ್ನಾಟಕ ಲೋಕ ಸೇವಾ ಆಯೋಗಕ್ಕೆ ಪ್ರಸ್ತಾವನೆಯನ್ನು ಈಗಾಗಲೇ ಸಲ್ಲಿಸಲಾಗಿರುತ್ತದೆ. ಮುಂಬಡ್ತಿ ಮೂಲಕ ಭರ್ತಿ ಮಾಡಲು ಸಹ ಕ್ರಮವಹಿಸಲಾಗುತ್ತಿದೆ. |

ಸಂಖ್ಯೆ: ಕಾಇ 41 ಎಲ್‌ಇಟಿ 2019

(ವೆಂಕಟರಮಣಪ್ಪ)
ಕಾರ್ಮಿಕ ಸಚಿವರು

**ಕರ್ನಾಟಕ ಸರ್ಕಾರ**

**ಸಂ:ಕಂಇ 11 ಭೂದಾಮ 2019**

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ:08.02.2019

**ಇಂದ:**

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಕಂದಾಯ ಇಲಾಖೆ,
ಬೆಂಗಳೂರು.

**ಗೆ:**

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಆಚಾರ್ ಹಾಲಪ್ಪ ಬಸಪ್ಪ ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:527 ಕ್ಕೆ ಉತ್ತರಿಸುವ ಕುರಿತು.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಆಚಾರ್ ಹಾಲಪ್ಪ ಬಸಪ್ಪ ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 527 ಕ್ಕೆ ಸಂಬಂಧಿಸಿದಂತೆ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

**(ಸಿ.ಪಟ್ಟನಂಜಯ್ಯ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಮಾಪನ)

# ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 527 |
| 2 | ಸದಸ್ಯರ ಹೆಸರು | ಶ್ರೀ ಆಚಾರ್ ಹಾಲಪ್ಪ ಬಸಪ್ಪ, (ಮಾನ್ಯ ವಿಧಾನ ಸಭಾ ಸದಸ್ಯರು) ಯಲಬುರ್ಗಾ ವಿಧಾನಸಭಾ ಕ್ಷೇತ್ರ |
| 4 | ಉತ್ತರಿಸಬೇಕಾದ ದಿನಾಂಕ | 11.02.2019 |
| 5 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಯಲಬುರ್ಗಾ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಕುಕನೂರು ಪಟ್ಟಣವನ್ನು ತಾಲ್ಲೂಕು ಕೇಂದ್ರವನ್ನಾಗಿ ಘೋಷಣೆ ಮಾಡಿದ ನಂತರ ಇದುವರೆಗೂ ಪ್ರಾರಂಭಿಸಲಾಗಿರುವ ಕಛೇರಿಗಳು ಯಾವುವು; | ಕಂದಾಯ ಇಲಾಖಾ ವತಿಯಿಂದ ತಹಶೀಲ್ದಾರ್ ಕಛೇರಿಯನ್ನು ಪ್ರಾರಂಭಿಸಲಾಗಿದೆ. ಇತರೆ ಇಲಾಖೆಗಳ ತಾಲ್ಲೂಕು ಮಟ್ಟದ ಕಛೇರಿಗಳನ್ನು ಸಂಬಂಧ ಪಟ್ಟ ಇಲಾಖೆಗಳು ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹಂತಹಂತವಾಗಿ ತೆರೆಯಲು ಅನುಮತಿ ನೀಡಲಾಗಿದೆ. |
| ಆ) | ತಾಲ್ಲೂಕು ಕೇಂದ್ರವಾಗಿ ಘೋಷಣೆಯಾದ ನಂತರ ಮುಂದಿನ ಪ್ರಕ್ರಿಯೆಗಳಿಗೆ ಬೇಕಾಗಿರುವ ಅನುದಾನ ವನ್ನು ಸರ್ಕಾರ ನೀಡಿದೆಯೇ; ಈ ಅನುದಾನ ವನ್ನು ಇದುವರೆಗೂ ಯಾವ ಯಾವ ಕೆಲಸ ಕಾರ್ಯಗಳಿಗೆ ಬಳಸಲಾಗಿದೆ (ವಿವರ ಒದಗಿಸುವುದು); | ಹೊಸದಾಗಿ ರಚನೆಯಾದ ಕುಕನೂರು ತಾಲ್ಲೂಕಿನ ಕಾರ್ಯಾರಂಭ ಮತ್ತು ಆಡಳಿತಾತ್ಮಕ ಪ್ರಕ್ರಿಯೆಯನ್ನು ಪ್ರಾರಂಭಿಸಲು ಹಾಗೂ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲು ಈವರೆಗೆ ಒಟ್ಟು ರೂ.15.00 ಲಕ್ಷಗಳ ಅನುದಾನವನ್ನು ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿರುತ್ತದೆ. ಮೂಲಭೂತ ಸೌಕರ್ಯಗಳನ್ನು ಒದಗಿಸುವ ಪ್ರಕ್ರಿಯೆ ಪ್ರಗತಿಯಲ್ಲಿದೆ. |
| ಇ) | ಮಿನಿ ವಿಧಾನಸೌಧ ಹಾಗೂ ವಿವಿಧ ಕಛೇರಿಗಳ ನಿರ್ಮಾಣಕ್ಕೆ ಕುಕನೂರ ಪಟ್ಟಣದಲ್ಲಿ ಜಾಗ ಗುರುತಿಲಾಗಿದೆಯೇ; ಹಾಗಿದ್ದಲ್ಲಿ, ಎಷ್ಟು ಎಕರೆ ಜಾಗವನ್ನು ಎಲ್ಲೆಲ್ಲಿ ಗುರುತಿಸಲಾಗಿದೆ; ಇದಕ್ಕೆ ತಗಲುವ ವೆಚ್ಚವೆಷ್ಟು; | ಮಿನಿವಿಧಾನಸೌಧ ಹಾಗೂ ವಿವಿಧ ಕಛೇರಿಗಳ ನಿರ್ಮಾಣಕ್ಕೆ ಜಮೀನನ್ನು ಗುರುತಿಸುವ ಪ್ರಕ್ರಿಯೆ ಜಾರಿಯಲ್ಲಿದೆ. |
| ಈ) | ತಹಶೀಲ್ದಾರರ ಕಾರ್ಯಾಲಯ ಹೊರತುಪಡಿಸಿ ಬೇರೆ ಯಾವುದೇ ಕಛೇರಿಗಳನ್ನು ಪ್ರಾರಂಭಿಸದೇ ವಿಳಂಬ ನೀತಿ ಅನುಸರಿಸಲು ಕಾರಣಗಳೇನು? | ಹೊಸ ತಾಲ್ಲೂಕು ಕೇಂದ್ರಗಳಲ್ಲಿ ಇತರೆ ಪ್ರಮುಖ ಇಲಾಖೆಗಳ ತಾಲ್ಲೂಕು ಮಟ್ಟದ ಕಛೇರಿಗಳನ್ನು ಪ್ರಾರಂಭಿಸಲು ಕ್ರಮ ಕೈಗೊಳ್ಳುವಂತೆ ಸಂಬಂಧಪಟ್ಟ ಇಲಾಖೆಗಳನ್ನು ಈಗಾಗಲೇ ಕೋರಲಾಗಿದ್ದು, ಈ ಬಗ್ಗೆ ಕ್ರಮವಹಿಸಲಾಗುತ್ತಿದೆ. |

ಕಂಇ 11 ಬೊದಾಪು 2019

(ಆರ್.ವಿ. ದೇಶಪಾಂಡೆ)
ಕಂದಾಯ ಸಚಿವರು

**<u>ಕರ್ನಾಟಕ ಸರ್ಕಾರ</u>**

**ಸಂ:ಕಂಇ 20 ಭೂದಾಸ 2019**

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ:08.02.2019

**<u>ಇಂದ:</u>**
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಕಂದಾಯ ಇಲಾಖೆ,
ಬೆಂಗಳೂರು.

**<u>ಗೆ:</u>**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಅನ್ನದಾನಿ ಕೆ. ಡಾ॥ (ಮಳವಳ್ಳಿ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:79 ಕ್ಕೆ ಉತ್ತರಿಸುವ ಕುರಿತು.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಅನ್ನದಾನಿ ಕೆ. ಡಾ॥ (ಮಳವಳ್ಳಿ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 79 ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

**(ಸಿ.ಪುಟ್ಟನಂಜಯ್ಯ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಮಾಪನ)

## ಕರ್ನಾಟಕ ವಿಧಾನಸಭೆ

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 79 |
| 2 | ಸದಸ್ಯರ ಹೆಸರು | ಶ್ರೀ ಅನ್ನದಾನಿ ಕೆ. ಡಾ॥ (ಮಳವಳ್ಳಿ) |
| 3 | ಉತ್ತರಿಸಬೇಕಾದ ದಿನಾಂಕ | 11.02.2019 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಪೋಡಿ ಮುಕ್ತ ಗ್ರಾಮ ಯಾವಾಗ ಘೋಷಣೆಯಾಯಿತು; ಮಳವಳ್ಳಿ ತಾಲ್ಲೂಕು ವ್ಯಾಪ್ತಿಯಲ್ಲಿ ಇದುವರೆವಿಗೂ ಎಷ್ಟು ಗ್ರಾಮಗಳು ಪೋಡಿ ಮುಕ್ತವಾಗಿವೆ; (ವಿವರ ನೀಡುವುದು) | ರಾಜ್ಯದಲ್ಲಿ ಪೋಡಿ ಮುಕ್ತ ಗ್ರಾಮ ಯೋಜನೆಯನ್ನು 14 ಸೆಪ್ಟೆಂಬರ್ 2015 ರಿಂದ ಪ್ರಾರಂಭಿಸಲಾಗಿದೆ.<br>ಈ ಯೋಜನೆಯಡಿ ಮಳವಳ್ಳಿ ತಾಲ್ಲೂಕು ವ್ಯಾಪ್ತಿಯಲ್ಲಿ ಇದುವರೆವಿಗೂ 65 ಗ್ರಾಮಗಳನ್ನು ಅಳತೆಗಾಗಿ ಆಯ್ಕೆ ಮಾಡಿಕೊಂಡು, 63 ಗ್ರಾಮಗಳಲ್ಲಿ ಅಳತೆ ಕಾರ್ಯ ಪೂರೈಸಲಾಗಿದೆ. ಮತ್ತು ಈ ಪೈಕಿ 57 ಗ್ರಾಮಗಳ ಪೋಡಿ ದುರಸ್ತಿ ಕಾರ್ಯ ಪೂರ್ಣಗೊಳಿಸಿ 56 ಗ್ರಾಮಗಳಲ್ಲಿ ಸಂಪೂರ್ಣ ಪಹಣಿ ಇಂಡೀಕರಣ ಕಾರ್ಯ ಪೂರ್ಣಗೊಳಿಸಲಾಗಿದೆ. |
| ಆ) | ಮಳವಳ್ಳಿ ತಾಲ್ಲೂಕು ವ್ಯಾಪ್ತಿಯಲ್ಲಿ ಎಷ್ಟು ರೈತರಿಗೆ ಪೋಡಿ ಮುಕ್ತ ಗ್ರಾಮ ಯೋಜನೆಯಡಿ ಉಚಿತವಾಗಿ ಪಹಣಿ ನೀಡಲಾಗಿದೆ? | ಮಳವಳ್ಳಿ ತಾಲ್ಲೂಕು ವ್ಯಾಪ್ತಿಯಲ್ಲಿ ಇದುವರೆವಿಗೂ 56 ಗ್ರಾಮಗಳಲ್ಲಿ ಸಂಪೂರ್ಣ ಪಹಣಿ ಇಂಡೀಕರಣ ಕಾರ್ಯ ಪೂರ್ಣಗೊಳಿಸಿ ಒಟ್ಟು 13498 ಏಕ ವ್ಯಕ್ತಿ ಪಹಣಿಗಳನ್ನು ಸೃಜಿಸಿ ವಿತರಿಸಲಾಗಿದೆ. |

ಕಂಇ 20 ಭೂದಾಸ 2019

(ಆರ್.ವಿ. ದೇಶಪಾಂಡೆ)
ಕಂದಾಯ ಸಚಿವರು

## ಕರ್ನಾಟಕ ಸರ್ಕಾರ

ಕಂಇ 51 ಟಿಎನ್‌ಆರ್ 2018

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ: 8/2/.2018

ಇಂದ:
**ಸರ್ಕಾರದ ಕಾರ್ಯದರ್ಶಿಗಳು**
ಕಂದಾಯ ಇಲಾಖೆ
ಬಹುಮಹಡಿಗಳ ಕಟ್ಟಡ
ಬೆಂಗಳೂರು.

ಇವರಿಗೆ:
**ಕಾರ್ಯದರ್ಶಿಗಳು**
ಕರ್ನಾಟಕ ವಿಧಾನ ಸಭೆ/~~ಪರಿಷತ್ತು~~
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಶ್ರೀ/~~ಶ್ರೀಮತಿ~~, ಹರೀಶ್ ಪೂಂಜ ಬೆಳ್ತಂಗಡಿ
ವಿಧಾನ ಸಭೆ/ ಪರಿಷತ್ ಸದಸ್ಯರು, ಇವರ ಚುಕ್ಕೆ ~~ಗುರುತಿನ~~/ಗುರುತಿಲ್ಲದ
ಪ್ರಶ್ನೆ ಸಂ: 367ಕ್ಕೆ ಉತ್ತರ ನೀಡುವ ಬಗ್ಗೆ.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ವಿಧಾನ ಸಭೆ/~~ಪರಿಷತ್~~ ಸದಸ್ಯರಾದ ಶ್ರೀ/~~ಶ್ರೀಮತಿ~~ ಹರೀಶ್ ಪೂಂಜ ಇವರ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂ: 367 ಕ್ಕೆ ಉತ್ತರಗಳ ಪ್ರತಿಗಳನ್ನು ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಶ್ರೀಪತಿ ಪಿ.ಕೆ.)
ಶಾಖಾಧಿಕಾರಿ
ಕಂದಾಯ ಇಲಾಖೆ,(ವಿಪತ್ತು ನಿರ್ವಹಣೆ)

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 367

ಸದಸ್ಯರ ಹೆಸರು : ಶ್ರೀ ಹರೀಶ್ ಪೂಂಜ (ಬೆಳ್ತಂಗಡಿ)

ಉತ್ತರಿಸುವವರು : ಕಂದಾಯ ಸಚಿವರು

ಉತ್ತರಿಸಬೇಕಾದ ದಿನಾಂಕ : 11.02.2019

| ಕ್ರ. ಸಂ. | ಪ್ರಶ್ನೆ | ಉತ್ತರ |
| --- | --- | --- |
| 1 | ಬೆಳ್ತಂಗಡಿ ತಾಲ್ಲೂಕಿನ ವಿವಿಧೆಡೆ ಸಾಕಷ್ಟು ಹಿಂಗಾರು ಮಳೆ ಬೀಳದೆ ಅಂತರ್ಜಲ ಮಟ್ಟ ಕುಸಿದಿದ್ದು, ಮುಂದಿನ ಬೇಸಿಗೆಯಲ್ಲಿ ಕುಡಿಯುವ ನೀರಿಗಾಗಿ ಹೆಚ್ಚಿನ ಅನುದಾನ ಹಾಗೂ ಟಾಸ್ಕ್ ಫೋರ್ಸ್ ಸಮಿತಿಗೆ ಅಧಿಕಾರ ನೀಡಲು ಸರ್ಕಾರ ಕೈಗೊಳ್ಳುವ ಕ್ರಮಗಳೇನು (ಮಾಹಿತಿ ನೀಡುವುದು)? | 2018–19ನೇ ಸಾಲಿನ ಹಿಂಗಾರು ಹಂಗಾಮಿನಲ್ಲಿ ಬೆಳ್ತಂಗಡಿ ತಾಲ್ಲೂಕನ್ನು ಬರಪೀಡಿತ ಪ್ರದೇಶವೆಂದು ಘೋಷಿಸಿದ್ದು, ಕೇಂದ್ರ ಸರ್ಕಾರದ ಎಸ್.ಡಿ.ಆರ್.ಎಫ್/ಎನ್.ಡಿ.ಆರ್.ಎಫ್ ಮಾರ್ಗಸೂಚಿಯ ಪ್ರಕಾರ ಕುಡಿಯುವ ನೀರಿನ ಕಾಮಗಾರಿಗಳನ್ನು ಕೈಗೊಳ್ಳಲು ಸೂಚನೆ ನೀಡಲಾಗಿದೆ. ದಿನಾಂಕ:02.01.2019ರಂದು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಭೆ ನಡೆಸಿ ಜಿಲ್ಲೆಯಲ್ಲಿ ಯಾವುದೇ ಕುಡಿಯುವ ನೀರಿನ ಸಮಸ್ಯೆಯಾಗದಂತೆ ಕ್ರಮ ಕೈಗೊಳ್ಳಲು ಸಂಬಂಧಪಟ್ಟ ಅಧಿಕಾರಿಗಳಿಗೆ ಸೂಚಿಸಲಾಗಿದೆ.<br>ತಾಲ್ಲೂಕು ಟಾಸ್ಕ್‌ಫೋರ್ಸ್ ಅಡಿಯಲ್ಲಿ ಅನುಮೋದನೆಗೊಂಡ ಕುಡಿಯುವ ನೀರಿನ ಕಾಮಗಾರಿಗಳನ್ನು ಜಿಲ್ಲಾಧಿಕಾರಿಗಳ ಅನುಮೋದನೆಯ ನಂತರ ತುರ್ತಾಗಿ ಕೈಗೊಳ್ಳಲು ಸೂಚಿಸಲಾಗಿದೆ.<br>ಕುಡಿಯುವ ನೀರಿನ ಕಾಮಗಾರಿಗಳಿಗಾಗಿ ಬೆಳ್ತಂಗಡಿ ಪಟ್ಟಣ ಪಂಚಾಯ್ತಿಗೆ ನಗರಾಭಿವೃದ್ಧಿ ಇಲಾಖೆಯಿಂದ ರೂ.15.00ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. |

ಕಂಇ 51 ಟಿಎನ್‌ಆರ್ 2019

(ಆರ್.ವಿ. ದೇಶಪಾಂಡೆ)
ಕಂದಾಯ ಸಚಿವರು

ಕರ್ನಾಟಕ ಸರ್ಕಾರ

ಸಂ.ಯುಸಕ್ರೀ 06 ಯುಸೇಭಾ 2018

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ
ಬೆಂಗಳೂರು, ದಿನಾಂಕ:11.02.2019.

ಇವರಿಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ,
ಬೆಂಗಳೂರು.

ಗೆ:
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ರಾಜೀವ್ ಪಿ. (ಕುಡಚಿ) ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:548ಕ್ಕೆ ಉತ್ತರ ನೀಡುವ ಬಗ್ಗೆ.

*****

ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ರಾಜೀವ್ ಪಿ. (ಕುಡಚಿ) ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:548ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ.

ನಿಮ್ಮ ನಂಬುಗೆಯ,

(ಗಿರಿಜಾ ಪಾಟೀಲ)
ಪೀಠಾಧಿಕಾರಿ (ಪ್ರ),
ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ.

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 548 |
| ಉತ್ತರಿಸುವ ದಿನಾಂಕ | : 11.02.2019 |
| ಸದಸ್ಯರ ಹೆಸರು | : ಶ್ರೀ ರಾಜೀವ್ ಪಿ. (ಕುಡಚಿ) |
| ಉತ್ತರಿಸುವ ಸಚಿವರು | : ಮಾನ್ಯ ಯುವ ಸಬಲೀಕರಣ ಹಾಗೂ ಕ್ರೀಡಾ ಸಚಿವರು. |

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರತಿ ಗ್ರಾಮದಲ್ಲಿ ಕ್ರೀಡಾ ಚಟುವಟಿಕೆಗಳಿಗಾಗಿ ಆಟದ ಮೈದಾನಕ್ಕಾಗಿ ಮೀಸಲಿಡಲು ಸ್ಥಳ ಗುರುತಿಸುವಂತೆ ಸರ್ಕಾರ ಸುತ್ತೋಲೆ ಹೊರಡಿಸಿದೆಯೇ; ಹೊರಡಿಸಿದ್ದಲ್ಲಿ ಪ್ರತಿಯನ್ನು ಒದಗಿಸುವುದು; | ಸರ್ಕಾರಿ ಭೂಮಿ ಲಭ್ಯವಿರುವ ಕಡೆ ಪ್ರತಿ ಗ್ರಾಮದಲ್ಲಿ ಕ್ರೀಡಾ ಚಟುವಟಿಕೆಗಳಿಗಾಗಿ ಆಟದ ಮೈದಾನಕ್ಕಾಗಿ ನಿವೇಶನ ಮೀಸಲಿಡಲು ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಹಸ್ತಾಂತರಿಸಲು ಕ್ರಮ ಕೈಗೊಳ್ಳುವಂತೆ ಕೋರಿ ದಿನಾಂಕ: 18-09-2018 ರಂದು ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಆಯುಕ್ತರು, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಇವರು ಪತ್ರ ಬರೆದಿರುತ್ತಾರೆ. |
| ಆ) | ಎಷ್ಟು ಗ್ರಾಮಗಳಲ್ಲಿ ಕ್ರೀಡಾ ಚಟುವಟಿಕೆಗಳಿಗಾಗಿ ಆಟದ ಮೈದಾನವನ್ನು ಕಾಯ್ದಿರಿಸಲಾಗಿದೆ; (ಜಿಲ್ಲಾವಾರು ಮಾಹಿತಿ ಒದಗಿಸುವುದು) | ಗ್ರಾಮಗಳಲ್ಲಿ, ಹೋಬಳಿ ಕೇಂದ್ರಗಳಲ್ಲಿ ಹಾಗೂ ಪ್ರಮುಖ ಪಟ್ಟಣಗಳಲ್ಲಿ ಕ್ರೀಡಾ ಮೂಲಸೌಕರ್ಯ ಸೃಜಿಸಲು ನಿವೇಶನವನ್ನು ಗುರುತಿಸುವ ಕಾರ್ಯ ಪ್ರಗತಿಯಲ್ಲಿದೆ. |
| ಇ) | ಪ್ರತಿ ಗ್ರಾಮಗಳಲ್ಲಿ ಆಟದ ಮೈದಾನದ ಸ್ಥಳ ಗುರುತಿಸುವುದರಿಂದ ಯುವಕರು ಕ್ರೀಡೆಯಲ್ಲಿ ಪಾಲ್ಗೊಳ್ಳಲು ಪ್ರೇರೇಪಿಸಿದಂತಾಗುವುದಿಲ್ಲವೇ;<br><br>ಹಾಗಿದ್ದಲ್ಲಿ, ನಿರ್ಲಕ್ಷ್ಯ ವಹಿಸಲು ಕಾರಣವೇನು; | ಹೌದು.<br><br>ಪಂಚಾಯತ್ ರಾಜ್ ಯುವ ಕ್ರೀಡಾ ಮತ್ತು ಖೇಲ್ ಅಭಿಯಾನ್ ಕಾರ್ಯಕ್ರಮದಡಿ ಆಟದ ಮೈದಾನಗಳನ್ನು ನಿರ್ಮಿಸಲಾಗಿದ್ದು, ಯಾವುದೇ ನಿರ್ಲಕ್ಷ್ಯ ವಹಿಸುವುದಿಲ್ಲ. |
| ಈ) | ಒತ್ತುವರಿಗೊಂಡ ಸರ್ಕಾರಿ ಭೂಮಿಯನ್ನು ತೆರವುಗೊಳಿಸಿ ಆಟದ ಮೈದಾನ ಸ್ಥಾಪಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ? | ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಒತ್ತುವರಿಗೊಂಡ ನಿವೇಶನಗಳನ್ನು ತೆರವುಗೊಳಿಸಲು ಕ್ರಮವಹಿಸಲಾಗುತ್ತಿದೆ. |

ಸಂಖ್ಯೆ: ಯುಸಕ್ರೀ 06 ಯುಸೇಭಾ 2019.

(ರಹೀಂ ಖಾನ್)
ಯುವ ಸಬಲೀಕರಣ ಹಾಗೂ ಕ್ರೀಡಾ ಸಚಿವರು.

ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 508
2. ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ಹ್ಯಾರಿಸ್ ಎನ್.ಎ.
3. ಉತ್ತರಿಸಬೇಕಾದ ದಿನಾಂಕ : 11.02.2019
4. ಉತ್ತರಿಸಬೇಕಾದ ಸಚಿವರು : ಮಾನ್ಯ ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು.

| ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಪರಿಸರ ಸಂರಕ್ಷಣೆ ಮತ್ತು ವಾಯು ಮಾಲಿನ್ಯ ನಿಯಂತ್ರಣಕ್ಕೆ ಸರ್ಕಾರವು ತೆಗೆದುಕೊಂಡ ಕ್ರಮಗಳು ಯಾವುವು; | ರಾಜ್ಯ ಸರ್ಕಾರದಿಂದ ಹಾಗೂ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಯಿಂದ ಪರಿಸರ ಮಾಲಿನ್ಯವನ್ನು ತಡೆಗಟ್ಟಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ:<br><br>ವಾಯು ಮಾಲಿನ್ಯ :<br><br>ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಯು ಪ್ರಾಯೋಜಿತ ರಾಷ್ಟ್ರೀಯ ವಾಯು ಗುಣಮಟ್ಟ ಪರಿಶೀಲನಾ ಕಾರ್ಯಕ್ರಮದ (NAMP) ಅಡಿಯಲ್ಲಿ ಬೆಂಗಳೂರು ನಗರವಲ್ಲದೇ ರಾಜ್ಯದ ಪ್ರಮುಖ ನಗರಗಳ ವಾಯು ಗುಣಮಟ್ಟವನ್ನು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಮಾಪನ ಮಾಡಲಾಗುತ್ತಿದೆ.<br><br>ಬೆಂಗಳೂರು ನಗರದ ವಾಯು ಗುಣಮಟ್ಟವನ್ನು ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಯ ಮಾರ್ಗಸೂಚಿಯಂತೆ 21 ಕೇಂದ್ರಗಳಲ್ಲಿ ಮಾಪನ ಮಾಡಲಾಗುತ್ತಿದೆ. 21 ಕೇಂದ್ರಗಳ ಪೈಕಿ 7 ನಿರಂತರ ವಾಯು ಮಾಪನ ಕೇಂದ್ರಗಳಲ್ಲಿ ಸತತ ಇಪ್ಪತ್ನಾಲ್ಕು ಗಂಟೆಗಳ ಕಾಲ ಗಂಧಕದ ಡೈಆಕ್ಸೈಡ್ ($SO_2$), ಸಾರಜನಕದ ಡೈಆಕ್ಸೈಡ್ ($NO_2$), ಧೂಳಿನ ಕಣಗಳ ಗಾತ್ರ 10 ಮೈಕ್ರಾನ್ ಹಾಗೂ 2.5 ಮೈಕ್ರಾನ್ ($PM_{10}$), ($PM_{2.5}$), ಇಂಗಾಲದ ಮಾನಾಕ್ಸೈಡ್ (CO), ಓಜೋನ್ ($O_3$), ಅಮೋನಿಯಾ ($NH_3$) ಮತ್ತು ಬೆನ್‌ಜೀನ್ (Benzene) ಸೇರಿದಂತೆ ಎಂಟು ಮಲಿನ ಕಾರಕಗಳನ್ನು ಮಾಪನ ಮಾಡಲಾಗುತ್ತಿದೆ ಹಾಗೂ 14 ಮಾನವ ಚಾಲಿತ ಕೇಂದ್ರಗಳಲ್ಲಿ (Manual Stations) 24 ಗಂಟೆಗಳ ಕಾಲ, ವಾರಕ್ಕೆ 2 ಬಾರಿ, ಗಂಧಕದ ಡೈ ಆಕ್ಸೈಡ್ ($SO_2$), ಸಾರಜನಕದ ಡೈ ಆಕ್ಸೈಡ್ ($NO_2$), ಧೂಳಿನ ಕಣಗಳ ಗಾತ್ರ 10 ಮೈಕ್ರಾನ್ ಹಾಗೂ 2.5 ಮೈಕ್ರಾನ್ ($PM_{10}$) ($PM_{2.5}$), ಅಮೋನಿಯ ಮತ್ತು ಸೀಸ ಮಲಿನಕಾರಕಗಳನ್ನು ವಿಶ್ಲೇಷಿಸಲಾಗುತ್ತಿದೆ<br><br>ಈ ಮಾಪನ ಕೇಂದ್ರಗಳಿಂದ ಸಂಗ್ರಹಿಸಿದ ದತ್ತಾಂಶವನ್ನು ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿ, ದೆಹಲಿಗೆ ವಿದ್ಯುನ್ಮಾನ ಮುಖಾಂತರ ಕಳುಹಿಸಲಾಗುತ್ತಿದೆ ಮತ್ತು ಮಂಡಳಿಯ ಅಂತರ್ಜಾಲದಲ್ಲಿ (ವೆಬ್‌ಸೈಟ್) ಪ್ರಕಟಿಸಲಾಗುತ್ತಿದೆ. ವಾಯು ಮಾಪನದ ದತ್ತಾಂಶವನ್ನು ಸಂಬಂಧಪಟ್ಟ ಇಲಾಖೆಗಳಿಗೆ ವಾಯು ಮಾಲಿನ್ಯ ನಿಯಂತ್ರಿಸುವ ನಿಟ್ಟಿನಲ್ಲಿ ಕ್ರಿಯಾಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸಲು ಸೂಚಿಸಿ ನಿಯತಕಾಲಿಕವಾಗಿ ಸಲ್ಲಿಸಲಾಗುತ್ತಿದೆ ಪ್ರತಿದಿನ ಬೆಂಗಳೂರಿನ ಮತ್ತು |

ನಿರಂತರ ಪರಿವೇಕ್ಷಕ ವಾಯುಗುಣಮಟ್ಟ ಮಾಪನ ಕೇಂದ್ರಗಳ ವಾಯುಗುಣಮಟ್ಟ ಸೂಚ್ಯಂಕವನ್ನು (AQI) ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರುಗಳಿಗೆ ಎಸ್.ಎಂ.ಎಸ್ ಮುಖಾಂತರ ಕಳುಹಿಸಲಾಗುತ್ತಿದೆ.

ಮಂಡಳಿಯು ಬೆಂಗಳೂರು ನಗರವಲ್ಲದೇ ರಾಜ್ಯದ 19 ಪ್ರಮುಖ ನಗರಗಳಲ್ಲಿ ಪರಿವೇಕ್ಷಕ ವಾಯುಗುಣಮಟ್ಟ ಮಾಪನ ಮಾಡುತ್ತಿದೆ.

- ಬೆಂಗಳೂರು, ಹುಬ್ಬಳ್ಳಿ-ಧಾರವಾಡ, ದಾವಣಗೆರೆ ಮತ್ತು ಗುಲ್ಬರ್ಗ ನಗರಗಳಲ್ಲಿ ಹೆಚ್ಚುತ್ತಿರುವ ವಾಯು ಮಾಲಿನ್ಯ ತಡೆಗಟ್ಟುವ ನಿಟ್ಟಿನಲ್ಲಿ ಈ ಕೆಳಗಿನ ಮೂರು ಸಮಿತಿಗಳು ಬೆಂಗಳೂರು ನಗರದಲ್ಲಿ ಸಕ್ರಿಯವಾಗಿ ಕಾರ್ಯನಿರ್ವಹಿಸುತ್ತಿವೆ.

1. ಕಾರ್ಯಪಡೆ ( Task Force Committee)
2. ಸಮನ್ವಯ ಸಮಿತಿ (Co-ordination Committee)
3. ವಾಯು ಗುಣಮಟ್ಟ ಮಾಪನ ಸಮಿತಿ (Air Quality Monitoring Committee)

- ಹುಬ್ಬಳ್ಳಿ-ಧಾರವಾಡ, ದಾವಣಗೆರೆ ಮತ್ತು ಗುಲ್ಬರ್ಗ ನಗರಗಳಲ್ಲಿ ಹೆಚ್ಚುತ್ತಿರುವ ವಾಯು ಮಾಲಿನ್ಯ ತಡೆಗಟ್ಟುವ ನಿಟ್ಟಿನಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕಾರ್ಯಪಡೆಯನ್ನು ರಚಿಸಿದೆ. ಕಾರ್ಯಪಡೆಯಲ್ಲಿ ಸಾರಿಗೆ, ಎನ್.ಡಬ್ಲ್ಯೂ.ಕೆ.ಆರ್.ಟಿ.ಸಿ, ಎಚ್.ಡಿ.ಎಂ.ಸಿ. ಆಯುಕ್ತರು ಸದಸ್ಯರಾಗಿರುತ್ತಾರೆ. ಈ ಸಮಿತಿಯು ನಗರಗಳಲ್ಲಿ ಹೆಚ್ಚುತ್ತಿರುವ ಮಾಲಿನ್ಯವನ್ನು ಕಡಿಮೆ ಮಾಡಲು ಸಕ್ರಿಯವಾಗಿ ಕಾರ್ಯನಿರ್ವಹಿಸುತ್ತಿವೆ
- ಬೆಂಗಳೂರು ನಗರದಲ್ಲಿ ಹೆಚ್ಚುತ್ತಿರುವ ವಾಯು ಮಾಲಿನ್ಯ ತಡೆಗಟ್ಟುವ ನಿಟ್ಟಿನಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯದ W.P.No.13029 / 1985 (Civil-PIL) ನಿರ್ದೇಶನದಂತೆ, ಸರ್ಕಾರದ ಆದೇಶ ಸಂಖ್ಯೆ ಅಪಜೀ/183/ಇಎನ್‌ವಿ/ 2001, ದಿನಾಂಕ:10.09.2001 ರಲ್ಲಿ ಪ್ರಥಮವಾಗಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಕಾರ್ಯಪಡೆ (Task Force) ಯನ್ನು ರಚಿಸಿದೆ. ಪ್ರಸ್ತುತ ಸದರಿ ಕಾರ್ಯಪಡೆಯ ಅಧ್ಯಕ್ಷತೆಯನ್ನು ಸರ್ಕಾರದ ಮುಖ್ಯ ಕಾರ್ಯದರ್ಶಿಗಳು ವಹಿಸಿರುತ್ತಾರೆ.
- ಈ ಕಾರ್ಯಪಡೆಯು 2003 ರಲ್ಲಿ 14 ಅಂಶಗಳ ಕ್ರಿಯಾ ಯೋಜನೆಗಳನ್ನು (ಅನುಬಂಧ-1) ರೂಪಿಸಿದ್ದು, ಪ್ರಸ್ತುತ ಅವುಗಳನ್ನು ಬಹುತೇಕ ಜಾರಿಗೊಳಿಸಲಾಗಿದೆಯೆಂದು ತಿಳಿದು, ದಿನಾಂಕ:12.12.2017 ರಂದು ನಡೆದ 22ನೇ ಕಾರ್ಯಪಡೆಯ ಸಭೆಯಲ್ಲಿ, ಪ್ರಸ್ತುತ ಸ್ಥಿತಿ ಹಾಗೂ ಭವಿಷ್ಯದ ನಗರಾಭಿವೃದ್ಧಿಯನ್ನು ಗಮನದಲ್ಲಿಟ್ಟು ಹೊಸ ಕ್ರಿಯಾ ಯೋಜನೆಗಳ ಅವಶ್ಯಕತೆಯಿದೆಯೆಂದು ತಿಳಿದು ವಾಯು ಮಾಲಿನ್ಯವನ್ನು ನಿಯಂತ್ರಿಸಲು ಹೊಸ ಕ್ರಿಯಾ ಯೋಜನೆಗಳನ್ನು ರೂಪಿಸಲು

ತೀರ್ಮಾನಿಸಲಾಯಿತು. ಅದರಂತೆ 48 ಅಂಶಗಳ ಹೊಸ ಕ್ರಿಯಾ ಯೋಜನೆಗಳನ್ನು (ಅನುಬಂಧ-2) ಸಿದ್ಧಪಡಿಸಿ, ದಿನಾಂಕ: 19.01.2018 ರಂದು ನಡೆದ ಸಮನ್ವಯ ಸಮಿತಿ ಸಭೆಯಲ್ಲಿ ಮಂಡಿಸಿ ಸಂಬಂಧಪಟ್ಟ ಇಲಾಖೆಗಳ ಸಲಹೆ/ತಿದ್ದುಪಡಿಯನ್ನು ಪಡೆದು, ದಿನಾಂಕ:7.6.2018ರಂದು ನಡೆದ 23ನೇ ಕಾರ್ಯಪಡೆಯ ನಡವಳಿಯಂತೆ, 48 ಅಂಶಗಳ ಕರಡು ಕ್ರಿಯಾ ಯೋಜನೆಗಳನ್ನು ಸಂಬಂಧಪಟ್ಟ ಇಲಾಖೆಗಳೊಂದಿಗೆ ಚರ್ಚಿಸಿ, ಸರ್ಕಾರದ ಆದೇಶ ಹೊರಡಿಸಲು ಮಂಡಳಿಯಿಂದ ದಿನಾಂಕ:14.06.2018 ರಂದು ಪ್ರಸ್ತಾವನೆಯು ಸರ್ಕಾರದಲ್ಲಿ ಸ್ವೀಕೃತವಾಗಿದ್ದು, ಸದರಿ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿರುತ್ತದೆ.

- ಬೆಂಗಳೂರು ನಗರದಲ್ಲಿ ಹೆಚ್ಚುತ್ತಿರುವ ವಾಯು ಮಾಲಿನ್ಯ ತಡೆಗಟ್ಟುವ ನಿಟ್ಟಿನಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 39423/2013, Suo Moto V/s State of Karnataka ರಲ್ಲಿ ನೀಡಿರುವ ನಿರ್ದೇಶನದಂತೆ, –ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಇವರ ಅಧ್ಯಕ್ಷತೆಯಲ್ಲಿ ಸಂಬಂಧಪಟ್ಟ ಇಲಾಖೆಗಳನ್ನೊಳಗೊಂಡ ಸಮನ್ವಯ ಸಮಿತಿಯನ್ನು ದಿನಾಂಕ:2.4.2014 ರಂದು ರಚಿಸಲಾಗಿದೆ. ಇದುವರೆಗೂ ಒಟ್ಟು 19 ಸಭೆಗಳು ನಡೆದಿದ್ದು, ವಾಯುಮಾಲಿನ್ಯ ನಿಯಂತ್ರಣದ ನಿಟ್ಟಿನಲ್ಲಿ ಸಮಿತಿಯು ಕಾರ್ಯನಿರ್ವಹಿಸುತ್ತಿದೆ. ಮಾನ್ಯ ಉಚ್ಚ ನ್ಯಾಯಾಲಯದ ನಿರ್ದೇಶನದಂತೆ, ಮಂಡಳಿಯು ಬೆಂಗಳೂರು ನಗರದಲ್ಲಿ ಹೆಚ್ಚುತ್ತಿರುವ ವಾಯು ಮಾಲಿನ್ಯ ನಿಯಂತ್ರಿಸಲು ಸಾರಿಗೆ ಇಲಾಖೆ, ಬಿ.ಬಿ.ಎಂ.ಪಿ ಹಾಗೂ ಪೋಲೀಸ್ ಇಲಾಖೆಗಳಿಗೆ ವಾಯು (ಮಾಲಿನ್ಯ ನಿವಾರಣೆ ಮತ್ತು ನಿಯಂತ್ರಣ) ಕಾಯ್ದೆ, 1981 ರ ಸೆಕ್ಷನ್ 31(ಎ) ಅಡಿಯಲ್ಲಿ ಅಲ್ಪಾವಧಿ ಮತ್ತು ದೀರ್ಘಾವಧಿ ಕ್ರಮಗಳನ್ನು ಅನುಷ್ಠಾನಗೊಳಿಸುವಂತೆ ದಿನಾಂಕ.28.3.2014 ರಂದು ನಿರ್ದೇಶಿಸಿದೆ. ಮಂಡಳಿಯ ಅಧ್ಯಕ್ಷರು ಸದರಿ ನಿರ್ದೇಶನಗಳ ಅನುಷ್ಠಾನದ ಪ್ರಗತಿ ಪರಿಶೀಲನೆಯನ್ನು ಸಂಬಂಧಿಸಿದ ಇತರೆ ಇಲಾಖೆಗಳ ಮುಖ್ಯಸ್ಥರೊಂದಿಗೆ ಸಮನ್ವಯ ಸಭೆಗಳ ಮುಖೇನ ನಡೆಸುತ್ತಿರುತ್ತಾರೆ.

- ದಿನಾಂಕ: 8.10.2018 ರಂದು, ಮಾನ್ಯ ಹಸಿರು ನ್ಯಾಯ ಮಂಡಳಿ, ನವದೆಹಲಿ, ನಾನ್-ಅಟೈನ್ಮೆಂಟ್ ನಗರಗಳ ವಾಯು ಮಾಲಿನ್ಯವನ್ನು ನಿಯಂತ್ರಿಸಲು ಸಮಗ್ರ ಕ್ರಿಯಾ ಯೋಜನೆಯನ್ನು ರೂಪಿಸಲು ರಾಜ್ಯದಲ್ಲಿ 6 ಸದಸ್ಯರನ್ನೊಳಗೊಂಡ ಸಮಿತಿಯನ್ನು ರಚಿಸಲು ಆದೇಶವನ್ನು ಹೊರಡಿಸಿದೆ. ಸದರಿ ನಿರ್ದೇಶನದಂತೆ ರಾಜ್ಯ ಸರ್ಕಾರ ಸರ್ಕಾರದ ಪ್ರಧಾನ ಕಾರ್ಯದರ್ಶಿ, (ಜೀವಿಪರಿಸ್ಥಿತಿ ಮತ್ತು ಪರಿಸರ)ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ನವೆಂಬರ್ 24, 2018 ರಂದು "ವಾಯು ಗುಣಮಟ್ಟ ಮಾನಿಟರಿಂಗ್ ಸಮಿತಿ" ಯನ್ನು ರಚಿಸಲಾಗಿದೆ. ಸದರಿ ಸಮಿತಿಯು ದಿನಾಂಕ:3.12.2018 ರಂದು ಸಭೆ ನಡೆಸಿ 48

ಅಂಶಗಳ ಕರಡು ಕ್ರಿಯಾ ಯೋಜನೆಗಳನ್ನು ಸಂಬಂಧಪಟ್ಟ ಇಲಾಖೆಗಳೊಂದಿಗೆ ಚರ್ಚಿಸಿ, ಅನುಮೋದನೆಗೊಳಿಸಿತು.

- ದಿನಾಂಕ: 8.10.2018 ರಂದು, ಮಾನ್ಯ ಹಸಿರು ನ್ಯಾಯ ಪೀಠ, ನವದೆಹಲಿ, ನಿರ್ದೇಶನದಂತೆ ಡಿಸೆಂಬರ್ 31, 2018 ರೊಳಗೆ ಕರಡು ಕ್ರಿಯಾ ಯೋಜನೆಗಳನ್ನು ಸಲ್ಲಿಸಬೇಕಾಗಿದ್ದ ಕಾರಣ, ಸದರಿ ಕರಡು ಕ್ರಿಯಾ ಯೋಜನೆಗಳನ್ನು ದಿನಾಂಕ: 22.12.2018 ರಂದು ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಗೆ ಸಲ್ಲಿಸಲಾಗಿದೆ. ಈ ಕರಡು ಕ್ರಿಯಾ ಯೋಜನೆಗಳನ್ನು ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಯು ಮಾನ್ಯ ಹಸಿರು ನ್ಯಾಯ ಪೀಠದ ಸಮಿತಿಗೆ ಸಲ್ಲಿಸಿ, ಸಮಿತಿಯ ಅಭಿಪ್ರಾಯ ಮತ್ತು ಅನುಮೋದನೆಯನ್ನು ದಿನಾಂಕ:31.01.2019 ರೊಳಗೆ ಪಡೆಯಲು ಯೋಜಿಸಲಾಗಿರುತ್ತದೆ.
- ವಾಹನಗಳ ಹೊಗೆ ತಪಾಸಣಾ ಜವಾಬ್ದಾರಿ ಸಾರಿಗೆ ಇಲಾಖೆಯ ವ್ಯಾಪ್ತಿಯಲ್ಲಿದೆ. ಆದರೂ, ಬೆಂಗಳೂರು ನಗರದಲ್ಲಿ ಹೆಚ್ಚುತ್ತಿರುವ ವಾಯು ಮಾಲಿನ್ಯವು, ಸಾರಿಗೆ ವಲಯದಿಂದ ಶೇ.42 ಉಂಟಾಗುತ್ತಿರುವುದನ್ನು ತಿಳಿದು, ಮಂಡಳಿಯು ಡೀಸೆಲ್ ಮತ್ತು ಪೆಟ್ರೋಲ್ ವಾಹನಗಳು ಹೊರಸೂಸುವ ಹೊಗೆಯನ್ನು ಮಾಪನ ಮಾಡಲು ಸುಸಜ್ಜಿತ ಉಪಕರಣಗಳನ್ನೊಳಗೊಂಡ 12 ಹೊಗೆ ಮಾಪನ ಮಾಡುವ ಸಂಚಾರಿ ವಾಹನಗಳನ್ನು ಖರೀದಿಸಿದ್ದು, ಈ 12 ವಾಹನಗಳ ಪೈಕಿ 6 ವಾಹನಗಳು ಬೆಂಗಳೂರು ನಗರಕ್ಕೆ ಹಾಗೂ ಮೈಸೂರು, ಮಂಗಳೂರು, ಧಾರವಾಡ, ಕಲಬುರ್ಗಿ, ಚಿತ್ರದುರ್ಗ ಮತ್ತು ಬಳ್ಳಾರಿ ನಗರಗಳಿಗೆ ತಲಾ ಒಂದು ವಾಹನ ಹಂಚಿಕೆ ಮಾಡಿದೆ. ಈ ವಾಹನಗಳನ್ನು ಸಾರಿಗೆ ಇಲಾಖೆ, ಪೊಲೀಸ್ ಇಲಾಖೆ, ಬಿ.ಎಂ.ಟಿ.ಸಿ ಮತ್ತು ಕೆ.ಎಸ್.ಆರ್.ಟಿ.ಸಿ ಸಂಸ್ಥೆಗಳ ಸಹಾಯದೊಂದಿಗೆ ಜಂಟಿ ಕಾರ್ಯಾಚರಣೆ ಬಳಸಲಾಗುತ್ತಿದ್ದು, ಆಗಸ್ಟ್ 2018 ರವರೆಗಿನ ವಾಹನ ತಪಾಸಣಾ ವಿವರಗಳು ಈ ಕೆಳಗಿನಂತಿದೆ.

| ಪರೀಕ್ಷಿಸಿದ ವಾಹನ ಸಂಖ್ಯೆ | | ಉತ್ತೀರ್ಣ | ಅನುತ್ತೀರ್ಣ |
|---|---|---|---|
| ಪೆಟ್ರೋಲ್ ವಾಹನಗಳು | 20099 | 17472 (86.9 %) | 2627 (13.1 %) |
| ಡೀಸೆಲ್ ವಾಹನಗಳು | 12627 | 9561 (75.7 %) | 3066(24.3 %) |

- ಮಿತಿಗಿಂತ ಹೆಚ್ಚು ಹೊಗೆ ಹೊರಸೂಸುವ ವಾಹನಗಳ ಮೇಲೆ ಕಾನೂನಾತ್ಮಕವಾಗಿ ಸಾರಿಗೆ ಇಲಾಖೆಯಿಂದ ಕ್ರಮ ಕೈಗೊಳ್ಳಲಾಗುತ್ತಿದೆ.
- ವಾಯುಮಾಲಿನ್ಯ ತಡೆಗಟ್ಟುವ ಬಗ್ಗೆ ಹೆಚ್ಚು ಮಾಹಿತಿ ನೀಡಲು ಕಾರ್ಯಾಗಾರ ಮತ್ತು ಸಭೆಗಳನ್ನು ಮಂಡಳಿಯ ಕಚೇರಿಗಳಲ್ಲಿ, ಕಾರ್ಖಾನೆಗಳಲ್ಲಿ ಹಾಗೂ ಸಂಬಂಧಿಸಿದ ಸಂಘ ಸಂಸ್ಥೆಗಳಲ್ಲಿ ನಿಯಮಿತವಾಗಿ ಮಂಡಳಿ ವತಿಯಿಂದ ಹಮ್ಮಿಕೊಳ್ಳಲಾಗುತ್ತಿದೆ. ಮಂಡಳಿಯು ಅಂತರ್ಜಾಲ ಹಾಗೂ ಪತ್ರಿಕೆ ಪ್ರಕಟಣೆಗಳ

ಮುಖಾಂತರ ವಾಯು ಮಾಲಿನ್ಯ ನಿಯಂತ್ರಿಸುವ ನಿಟ್ಟಿನಲ್ಲಿ ತಿಳುವಳಿಕೆ ನೀಡಲಾಗುತ್ತಿದೆ.

- ಬೆಂಗಳೂರು ನಗರದಲ್ಲಿ ವಾಯು ಮಾಲಿನ್ಯವನ್ನು ತಡೆಗಟ್ಟಲು ಭಾರತ ಸರ್ಕಾರವು 1997 ರಲ್ಲಿ ಹಸಿರು ಇಂಧನ ನೀತಿ (Green Fuel Policy) ಜಾರಿಗೊಳಿಸಿತು. ಇದರಿಂದ ಇಂಧನದಲ್ಲಿ ಸೀಸ ಮುಕ್ತಗೊಳಿಸಿ 0.25 % ರಷ್ಟಿದ್ದ ಗಂಧಕದ ಪ್ರಮಾಣವನ್ನು ಹಂತಹಂತವಾಗಿ ಕಡಿಮೆಗೊಳಿಸಿ 2010 ರಿಂದ 0.005 % ಗೆ ಇಳಿಸಲಾಗಿದೆ.

<u>ವಾಯು ಮಾಲಿನ್ಯವನ್ನು ತಡೆಯಲು ತೆಗೆದುಕೊಂಡ ಇತರ ಕ್ರಮಗಳು:</u>

ಹೆಚ್ಚುತ್ತಿರುವ ಧೂಳಿನ ಕಣಗಳು ಮತ್ತು ವಾಯು ಮಾಲಿನ್ಯಕ್ಕೆ ಕಾರಣವಾದಂತಹ ಇತರೆ ಅಂಶಗಳನ್ನು ತಡೆಯುವ ನಿಟ್ಟಿನಲ್ಲಿ ರಾಜ್ಯ ಸರ್ಕಾರ ಮತ್ತು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿವತಿಯಿಂದ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ

- ಪರಿಸರ (ಸಂರಕ್ಷಣಾ) ಕಾಯ್ದೆ, 1986 ರಲ್ಲಿ ನಿಗದಿಪಡಿಸಿರುವಂತ ವಾಯು ಮಾನಕಗಳು ನಿಗದಿಪಡಿಸಿದ ಪರಿಮಿತಿಯೊಳಗಿರುವಂತೆ ಕಾರ್ಖಾನೆಗಳಿಗೆ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ನೀಡುವ ಸಮ್ಮತಿ ಪತ್ರದಲ್ಲಿ ನಿಬಂಧನೆ ಹಾಕಲಾಗುತ್ತಿದೆ ಹಾಗೂ ಆಗಿಂದಾಗ್ಗೆ ವಾಯು ಮಾಲಿನ್ಯ ಮಾಡುವಂತಹ ಕಾರ್ಖಾನೆಗಳನ್ನು ಪರಿವೀಕ್ಷಣೆಗೊಳಪಡಿಸಲಾಗುತ್ತಿದೆ.
- ರಾಸಾಯನಿಕ ಹಾಗೂ ಇನ್ನಿತರ ಅಧಿಕ ಮಾಲಿನ್ಯ ಉಂಟುಮಾಡುವ ಕೈಗಾರಿಕೆಗಳಿಗೆ ನಿರಂತರ ವಾಯು ಮಲಿನಕಾರಕಗಳ ಮಾಪನ ಉಪಕರಣಗಳನ್ನು ಅಳವಡಿಸಿ ಮಾಪನ ವರದಿಯನ್ನು ಕೇಂದ್ರ ಮತ್ತು ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಅಂತರ್ಜಾಲಗಳಿಗೆ ಸಂಪರ್ಕ ಕಲ್ಪಿಸಲಾಗಿದೆ ಹಾಗೂ ಕೈಗಾರಿಕೆಗಳು ನಿಗಧಿ ಪಡಿಸಿದ ವಾಯು ಮಲಿನಕಾರಕಗಳ ಮಾನಕಗಳ ಮಿತಿ ಮೀರಿದ್ದಲ್ಲಿ ಕಾನೂನು ರೀತಿಯ ಕ್ರಮ ಕೈಗೊಳ್ಳಲಾಗುತ್ತಿದೆ. ಕೈಗಾರಿಕೆಗಳು ಸಮರ್ಪಕವಾದ ವಾಯುಮಾಲಿನ್ಯ ನಿಯಂತ್ರಣ ಉಪಕರಣ ಹಾಗೂ ನಿರ್ದಿಷ್ಟ ಎತ್ತರದ ಚಿಮಣಿ (Chimney) ಅಳವಡಿಸಲು ಹಾಗೂ ವಾಯು ಮಾಲಿನ್ಯ ನಿಯಂತ್ರಣ ಉಪಕರಣಗಳನ್ನು ಸುಸ್ಥಿತಿಯಲ್ಲಿಡಲು ನಿಬಂಧನೆಗಳನ್ನು ವಿಧಿಸಲಾಗುತ್ತಿದೆ. ಇವುಗಳ ಕಾರ್ಯಕ್ಷಮತೆಯನ್ನು ಪರಿವೀಕ್ಷಣೆ ಹಾಗೂ ಮಾಪನ ಕಾರ್ಯದ ಮೂಲಕ ಪರೀಕ್ಷಿಸಿ ಅಗತ್ಯ ಕ್ರಮ ಕೈಗೊಳ್ಳಲಾಗುತ್ತಿದೆ.
- ಘನತ್ಯಾಜ್ಯ ಸುಡುವುದರಿಂದ ಉಂಟಾಗುವ ವಾಯು ಮಾಲಿನ್ಯವನ್ನು ತಡೆಯುವ ದೃಷ್ಟಿಯಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ ಅಪಜೀ 05 ಇಪಿಸಿ 2017, ದಿನಾಂಕ:03.08.2017ರಲ್ಲಿ ರಾಜ್ಯ ಸರ್ಕಾರವು ವಾಯು (ಮಾಲಿನ್ಯ ನಿಯಂತ್ರಣ ಮತ್ತು ನಿವಾರಣೆ) ಕಾಯ್ದೆ 1981 ರ ಕಲಂ 19(5)ರ ಅಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು

ಜಲಾಯನಿಕಿ, ಬೃಹತ್ ಬೆಂಗಳೂರು ಮಹಾನಗರಪಾಲಿಕೆ ವ್ಯಾಪ್ತಿಯು ಸೇರಿದಂತೆ ರಾಜ್ಯದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಹಾಗೂ ರಾಜ್ಯಾದ್ಯಂತ ಇರುವ ಘನತ್ಯಾಜ್ಯ ಭೂಭರ್ತಿ ಘಟಕಗಳಲ್ಲಿನ ತೆರೆದ ಜಾಗದಲ್ಲಿ ಮರಗಿಡಗಳ ರೆಂಬೆ ಮತ್ತು ಎಲೆಗಳೂ ಸೇರಿದಂತೆ ಯಾವುದೇ ರೀತಿಯ ಘನತ್ಯಾಜ್ಯಗಳನ್ನು ಸುಡುವುದನ್ನು ಸಂಪೂರ್ಣವಾಗಿ ನಿಷೇಧಿಸಲಾಗಿದೆ.

- ಸರ್ಕಾರವು ನಿರ್ಮಾಣ ಮತ್ತು ಕಟ್ಟಡ ಉರುಳಿಸುವ ಘನತ್ಯಾಜ್ಯ ನಿಯಮ 2016 ನ್ನು (Construction & Demolision Waste Rules-2016) ಕಡ್ಡಾಯವಾಗಿ ಪಾಲಿಸಲು ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬಿ.ಎಂ.ಆರ್.ಸಿ.ಎಲ್, ಕೆ.ಆರ್.ಡಿ.ಎಲ್, ಸಿ.ಪಿ.ಡಬ್ಲ್ಯೂ.ಡಿ, ಪಿ.ಡಬ್ಲ್ಯೂ.ಡಿ, ಇಲಾಖೆಗಳಿಗೆ ಜಾರಿಗೊಳಿಸಲು ನಿರ್ದೇಶನ ನೀಡಲಾಗಿದೆ. ಮೆ॥ ರಾಕ್ ಕ್ರಿಸ್ಟಲ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಕಟ್ಟಡ ತ್ಯಾಜ್ಯ ಸಂಸ್ಕರಿಸುವ ಘಟಕವನ್ನು ನಡೆಸಲು ಮಂಡಳಿ ವತಿಯಿಂದ ಅನುಮತಿಯನ್ನು ನೀಡಲಾಗಿದೆ. ಕಟ್ಟಡಗಳ ನಿರ್ಮಾಣ ಮತ್ತು ಕಟ್ಟಡ ಉರುಳಿಸುವ ಸಮಯದಲ್ಲಿ ಉಂಟಾಗುವ ಘನತ್ಯಾಜ್ಯಗಳನ್ನು (Construction & Demolition Waste) ವಾಹನಗಳಲ್ಲಿ ಸಾಗಿಸುವ ಸಮಯದಲ್ಲಿ ಅವುಗಳನ್ನು ಸೂಕ್ತ ರೀತಿಯಲ್ಲಿ ಮುಚ್ಚಿಕೊಂಡು ಸಾಗಿಸುವಂತೆ ಹಾಗೂ ಅವುಗಳಿಗೆ ನೀರಿನ ಸಿಂಪರಣೆ ಮಾಡಿ ಯಾವುದೇ ರೀತಿಯಲ್ಲಿ ವಾಯು ಮಾಲಿನ್ಯ ಆಗದಂತೆ ಕ್ರಮ ಕೈಗೊಳ್ಳುವಂತೆ ಸಾರ್ವಜನಿಕರಿಗೂ ಸೇರಿದಂತೆ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬಿ.ಎಂ.ಆರ್.ಸಿ.ಎಲ್, ಕೆ.ಆರ್.ಡಿ.ಎಲ್, ಸಿ.ಪಿ.ಡಬ್ಲ್ಯೂ.ಡಿ, ಪಿ.ಡಬ್ಲ್ಯೂ.ಡಿ, ಇಲಾಖೆಗಳಿಗೆ ನಿರ್ದೇಶನ ನೀಡಲಾಗಿದೆ.
- ಸರ್ಕಾರದ ಅಧಿಸೂಚನೆ ಸಂಖ್ಯೆ: ಅಪಜೀ 168 ಇಪಿಸಿ 2017, ದಿನಾಂಕ:11.08.2017ರಲ್ಲಿ ರಾಜ್ಯ ಸರ್ಕಾರವು ವಾಯು (ಮಾಲಿನ್ಯ ನಿವಾರಣೆ ಮತ್ತು ನಿಯಂತ್ರಣ) ಕಾಯಿದೆ, 1981ರ ಕಲಂ 19(3)ರ ಅನುಸಾರ ರಾಜ್ಯಾದ್ಯಂತ ವಾಯುಮಾಲಿನ್ಯ ನಿಯಂತ್ರಣಕ್ಕೊಳಪಟ್ಟಿರುವ ಪ್ರದೇಶದಲ್ಲಿನ ಸಿಮೆಂಟ್ ಒಲೆಗೆ (kiln) ಮತ್ತು ಸಿಮೆಂಟ್ ಉತ್ಪಾದನಾ ಘಟಕಗಳಿಗೆ ಹೊಂದಿಕೊಂಡಿರುವ ಸುಣ್ಣದಕಲ್ಲನ್ನು ಬಳಸಿ ಗಂಧಕದ ಡೈಆಕ್ಸೈಡ್ ($SO_2$) ಹೊರಸೂಸುವಿಕೆಯನ್ನು ನಿಯಂತ್ರಿಸಬಲ್ಲ ಘಟಕಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಕೈಗಾರಿಕೆಗಳಲ್ಲಿ ಪೆಟ್ ಕೋಕ್ ಅನ್ನು ಇಂಧನವಾಗಿ ಬಳಸುವುದನ್ನು ನಿಷೇಧಿಸಲಾಗಿದೆ.
- ಕೈಗಾರಿಕೆಗಳ ಚಟುವಟಿಕೆಗಳ ಅನುಸಾರವಾಗಿ ವಾಯುಮಾಲಿನ್ಯ ತಡೆಗಟ್ಟುವ ಬಗ್ಗೆ ಹೆಚ್ಚು ಮಾಹಿತಿ ನೀಡಲು ಕಾರ್ಯಾಗಾರ ಮತ್ತು ಸಭೆಗಳನ್ನು ಮಂಡಳಿಯ ಕಛೇರಿಗಳಲ್ಲಿ, ಕಾರ್ಖಾನೆಗಳಲ್ಲಿ ಹಾಗೂ ಸಂಬಂಧಿಸಿದ ಸಂಘ ಸಂಸ್ಥೆಗಳಲ್ಲಿ ನಿಯಮಿತವಾಗಿ ಹಮ್ಮಿಕೊಳ್ಳಲಾಗುತ್ತಿದೆ. ಮಂಡಳಿಯ ಅಂತರ್ಜಾಲ ಹಾಗೂ ಪತ್ರಿಕೆ

ಪ್ರಕಟಣೆಗಳ ಮುಖಾಂತರ ವಾಯು ಮಾಲಿನ್ಯ ನಿಯಂತ್ರಿಸುವ ನಿಟ್ಟಿನಲ್ಲಿ ತಿಳುವಳಿಕೆ ನೀಡಲಾಗುತ್ತಿದೆ.

ಶಬ್ದ ಮಾಲಿನ್ಯ:

ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ವತಿಯಿಂದ ಬೆಂಗಳೂರಿನ 10 ನಿರಂತರ ಶಬ್ದ ಪರಿಶೀಲನಾ ಕೇಂದ್ರಗಳನ್ನು ಸ್ಥಾಪಿಸಲಾಗಿದೆ. ಈ ಕೇಂದ್ರಗಳು ವಾಣಿಜ್ಯ, ಕೈಗಾರಿಕಾ, ವಸತಿ ಮತ್ತು ಸೂಕ್ಷ್ಮ ಪ್ರದೇಶಗಳನ್ನು ಪ್ರತಿನಿಧಿಸುತ್ತದೆ. ಶಬ್ದ ಮಾಪನ ಮಾಡುವುದನ್ನು ಎಲ್ಲಾ ದೊಡ್ಡ ಗಾತ್ರದ ಕೈಗಾರಿಕೆಗಳಿಗೆ ಕಡ್ಡಾಯ ಮಾಡಲಾಗಿದೆ. ಮಂಡಳಿಯು ದೂರುಗಳನ್ನು ಸ್ವೀಕರಿಸಿದಾಗ ಶಬ್ದ ಮಟ್ಟವನ್ನು ಮಾಪನ ಮಾಡಿ ದತ್ತಾಂಶವನ್ನು ಕರ್ನಾಟಕ ಸರ್ಕಾರವು ಶಬ್ದ ಮಾಲಿನ್ಯ (ಹತೋಟಿ ಮತ್ತು ನಿಯಂತ್ರಣ) ನಿಯಮ, 2000 ರಡಿಯಲ್ಲಿ ನೀಡಲಾದ ಅಧಿಸೂಚನೆ ಸಂಖ್ಯೆ, ಎಫ್‌ಇಇ 46 ಇಎನ್‌ವಿ 2000, ದಿನಾಂಕ: 13.8.2002 ರಂತೆ ಕ್ರಮ ಕೈಗೊಳ್ಳಲು ಪೋಲೀಸು ಇಲಾಖೆಗೆ ಒದಗಿಸಲಾಗುವುದು.

ಜಲ ಮಾಲಿನ್ಯ:

ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯು ರಾಷ್ಟ್ರೀಯ ಜಲ ಗುಣಮಟ್ಟ ಪರಿಶೀಲನಾ ಕಾರ್ಯಕ್ರಮದ (NWMP) ಅಡಿಯಲ್ಲಿ 125 ಕೆರೆಗಳ ನೀರಿನ ಗುಣಮಟ್ಟ ಪರಿಶೀಲನೆ ಮಾಡುತ್ತಿದೆ. ಬೆಂಗಳೂರು ಮತ್ತು ರಾಜ್ಯದ ಪ್ರಮುಖ ನಗರಗಳಲ್ಲಿರುವ ಕೆರೆಗಳ ನೀರಿನ ಮಾದರಿಗಳನ್ನು ಪ್ರತಿ ತಿಂಗಳು ಸಂಗ್ರಹಿಸಿ ಮಂಡಳಿಯು ವಿಶ್ಲೇಷಣೆ ಮಾಡುತ್ತಿದೆ ಮತ್ತು ಸಂಬಂಧಪಟ್ಟ ಇಲಾಖೆಗಳಿಗೆ ಕೆರೆಗಳ ನೀರಿನ ಜಲಮಾಲಿನ್ಯವನ್ನು ತಡೆಗಟ್ಟಲು ವರದಿಯನ್ನು ಸಲ್ಲಿಸಲಾಗುತ್ತಿದೆ. ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಯು ಜಲ (ಮಾಲಿನ್ಯ ನಿವಾರಣೆ ಮತ್ತು ನಿಯಂತ್ರಣ) ಕಾಯ್ದೆ, 1974 ರ ಕಲಂ 18(ಬಿ) ಅಡಿ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಗೆ ನೀಡಿದ ನಿರ್ದೇಶನದ ನಂತರ ಮಂಡಳಿಯು ದಿನಾಂಕ: 28.10.2015 ರಂದು ಬಿಬಿಎಂಪಿ/ಬಿಡಿಎ/ಬಿಡಬ್ಲ್ಯೂಎಸ್‌ಎಸ್‌ಬಿ/ಎಲ್‌ಡಿಎ ಮತ್ತು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಇವರಿಂದ ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಯು ನೀಡಿದ ನಿರ್ದೇಶನಗಳಿಗೆ ಈ ಕೆಳಕಂಡ ಅನುಪಾಲನಾ ವರದಿ ನೀಡುವಂತೆ ಕೋರಲಾಗಿದೆ.

1. ಬಿಬಿಎಂಪಿ ಮತ್ತು ಬಿಡಬ್ಲ್ಯೂಎಸ್‌ಎಸ್‌ಬಿ ಗಳನ್ನು ಸಾಕಷ್ಟು ಸಾಮರ್ಥ್ಯದ ತ್ಯಾಜ್ಯ ನೀರು ಸಂಸ್ಕರಣಾ ಘಟಕಗಳನ್ನು ಮತ್ತು ಕೆರೆಗಳ ಜಲಾನಯನ ಪ್ರದೇಶವನ್ನು ಸಂಪೂರ್ಣವಾಗಿ ಒಳಗೊಳ್ಳುವಂತೆ ಖಾಲಿ ಬಿಟ್ಟಿರುವ ಜಾಗಗಳಲ್ಲಿ ಒಳ ಚರಂಡಿ ವ್ಯವಸ್ಥಾಪನೆಯನ್ನು ಅಳವಡಿಸತಕ್ಕದ್ದು.
2. ಬಿಬಿಎಂಪಿ/ಬಿಡಬ್ಲ್ಯೂಎಸ್‌ಎಸ್‌ಬಿ ಸಂಸ್ಕರಿಸಿದ ಗೃಹ ತ್ಯಾಜ್ಯ ನೀರನ್ನು ಕೈಗಾರಿಕೆ ಬಳಕೆಗೆ/ವೃಕ್ಷ/ಬಸ್‌ಗಳನ್ನು ಸ್ವಚ್ಛಗೊಳಿಸಲು/ಉದ್ಯಾನವನ/ ತೋಟಗಾರಿಕಾ ಉದ್ದೇಶಕ್ಕಾಗಿ, ನೀರಾವರಿ ಹಾಗೂ ಟಾಯ್ಲೆಟ್ ಫ್ಲಶಿಂಗ್‌ಗಾಗಿ ಬಳಸುವುದರಿಂದ ಕೆರೆಗಳನ್ನು ಸೇರದಿರುವುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.

3. ಬಿ.ಬಿ.ಎಂ.ಪಿ ಮೇಲೆ ನಿರ್ದೇಶಿಸಲಾದ ಕ್ರಮಗಳನ್ನು ಅನುಷ್ಠಾನಗೊಳಿಸಲು ಕಾಲಮಿತಿಯೊಳಗೊಂಡ ಕ್ರಿಯಾ ಯೋಜನೆ ತಯಾರಿಸತಕ್ಕದ್ದು ಮತ್ತು ಅನುಷ್ಠಾನವನ್ನು ನಿಯತವಾಗಿ ಮೇಲ್ವಿಚಾರಣೆ ಮಾಡುವುದು.
4. ಸಂಬಂಧಪಟ್ಟ ಅಧಿಕಾರಿಗಳು ಕೆರೆಗಳ ಸುತ್ತಲೂ ಎರಿ ನಿರ್ಮಿಸತಕ್ಕದ್ದು.
5. ಬಿಡಿಎ/ಬಿಬಿಎಂಪಿ/ಎಲ್‌ಡಿಎ/ಬಿಡಬ್ಲ್ಯುಎಸ್‌ಎಸ್‌ಬಿ ಗಳನ್ನು ಅಲ್ಪಾವಧಿ ಕ್ರಮವಾಗಿ ಕೆರೆಗಳಲ್ಲಿ ವಾಯು ಪೂರಕಗಳನ್ನು/ಆಕ್ಸಿಜನೀಕರಣ ಮಾಡಲು ಇಂತಹ ಸೂಕ್ತ ಸಾಧನಗಳನ್ನು ಅಳವಡಿಸುವ ಸಾಧ್ಯತೆಯನ್ನು ಅನ್ವೇಷಿಸತಕ್ಕದ್ದು
5. ವರ್ತೂರು ಮತ್ತು ಬೆಳಂದೂರು ಈ ಎರಡು ಕೆರೆಗಳನ್ನು ಜಿಲ್ಲಾಧಿಕಾರಿಗಳು (ಬೆಂಗಳೂರು ನಗರ) ಮತ್ತು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಕೆರೆಯ ಗಡಿಯನ್ನು ಮೀಸಲಿರಿಸತಕ್ಕದ್ದು.

ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಯ ರಾಷ್ಟ್ರೀಯ ಜಲ ಗುಣಮಟ್ಟ ಪರಿಶೀಲನಾ ಕಾರ್ಯಕ್ರಮದ (NWMP) ಅಡಿಯಲ್ಲಿ ರಾಜ್ಯದಲ್ಲಿನ ಪ್ರಮುಖ ನದಿಗಳಾದ ಕಾವೇರಿ, ತುಂಗ, ಭದ್ರ, ತುಂಗಭದ್ರ, ಘಟಪ್ರಭ, ಮಲಪ್ರಭ, ಭೀಮ ಮತ್ತು ಕೃಷ್ಣ ನದಿಗಳು, ಅವುಗಳ ಉಪನದಿಗಳು ಮತ್ತು ತೊರೆಗಳಲ್ಲಿನ ನೀರಿನ ಗುಣಮಟ್ಟವನ್ನು ಮಂಡಳಿಯು 98 ಸ್ಥಳಗಳಲ್ಲಿ ಪ್ರತಿ ತಿಂಗಳು ಮಾದರಿಗಳನ್ನು ಸಂಗ್ರಹಿಸಿ, ವಿಶ್ಲೇಷಣಾ ವರದಿಯನ್ನು ತಯಾರಿಸಿ, ಸರ್ಕಾರದ ಸಂಬಂಧಪಟ್ಟ ಇಲಾಖೆಗಳಿಗೆ ಹಾಗೂ ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಗೆ ಸಲ್ಲಿಸುತ್ತಿದೆ.

ರಾಜ್ಯದ ಪ್ರಮುಖ ನದಿಗಳು ಹಾಗೂ ಉಪನದಿಗಳಲ್ಲಿ 17 ಕಲುಷಿತಗೊಂಡಿರುವ ಪ್ರದೇಶಗಳ ವ್ಯಾಪ್ತಿಯ ಪುನಶ್ಚೇತನ ಮಾಡಲು ಹಾಗೂ ನದಿ ನೀರಿನ ಗುಣಮಟ್ಟದ ವಿಶ್ಲೇಷಣೆಯ ಆಧಾರದ ಮೇಲೆ ಹಾಗೂ ಬಿ.ಓ.ಡಿ <3 ಮಿ.ಗ್ರಾಂ/ಲೀ ಮತ್ತು ಫೀಕಲ್ ಕೋಲಿಫಾರ್ಮ್<500 ಎಂ.ಪಿ.ಎನ್/100 ಮಿಲೀ ಒಳಗೆ ನದಿ ನೀರಿನ ಗುಣಮಟ್ಟವನ್ನು ಕಾಯ್ದುಕೊಳ್ಳಲು ಆರು ತಿಂಗಳೊಳಗೆ ನಾಲ್ಕು ಸದಸ್ಯರನ್ನೊಳಗೊಂಡ ನದಿ ಪುನಶ್ಚೇತನ ಸಮಿತಿಯನ್ನು ರಚಿಸಲು ದಿನಾಂಕ: 20.9.2018 ರಂದು, ಮಾನ್ಯ ರಾಷ್ಟ್ರೀಯ ಹಸಿರು ನ್ಯಾಯ ಪೀಠ, ನವದೆಹಲಿ ನಿರ್ದೇಶಿಸಿರುತ್ತದೆ. ಸದರಿ ನಿರ್ದೇಶನದಂತೆ ರಾಜ್ಯ ಸರ್ಕಾರವು ಸರ್ಕಾರದ ಪ್ರಧಾನ ಕಾರ್ಯದರ್ಶಿ (ಜೀವಿಪರಿಸ್ಥಿತಿ ಮತ್ತು ಪರಿಸರ), ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ 4 ಸದಸ್ಯರನ್ನೊಳಗೊಂಡ ಸಮಿತಿಯನ್ನು ನವೆಂಬರ್ 24, 2018 ರಂದು "ನದಿ ಪುನಶ್ಚೇತನ ಸಮಿತಿ" ಯನ್ನು ರಚಿಸಿದೆ. ಸದರಿ ಸಮಿತಿಯು ದಿನಾಂಕ:3.12.2018 ರಂದು ಸಭೆ ನಡೆಸಿ, ರಾಜ್ಯದಲ್ಲಿ ಮಲಿನಗೊಂಡಿರುವ 17 ನದಿಗಳ ಪ್ರದೇಶಗಳ ವ್ಯಾಪ್ತಿಯನ್ನು ಪುನಶ್ಚೇತನ ಮಾಡಲು ಕರಡು ಕ್ರಿಯಾ ಯೋಜನೆಗಳನ್ನು ಸಂಬಂಧಪಟ್ಟ ಇಲಾಖೆಗಳೊಂದಿಗೆ ಚರ್ಚಿಸಿ, ನಿಗದಿತ ಅವಧಿಯೊಳಗೆ

ಅನುಷ್ಠಾನಗೊಳಿಸಲು ಮಾನ್ಯ ರಾಷ್ಟ್ರೀಯ ಹಸಿರು ನ್ಯಾಯ ಪೀಠ, ನವದೆಹಲಿಗೆ ಸಲ್ಲಿಸುವುದಕ್ಕೆ ತೀರ್ಮಾನಿಸಿರುತ್ತದೆ.

ತದನಂತರ, ಮಾನ್ಯ ರಾಷ್ಟ್ರೀಯ ಹಸಿರು ನ್ಯಾಯ ಪೀಠ, ನವದೆಹಲಿ. ದಿನಾಂಕ:19.12.2018 ರಂದು ಮತ್ತೊಂದು ಆದೇಶ ಹೊರಡಿಸಿ, ಈಗಾಗಲೇ ಕ್ರಿಯಾ ಯೋಜನೆಗಳನ್ನು ಸಲ್ಲಿಸಿರುವ ರಾಜ್ಯಗಳಿಗೆ ಸದರಿ ಕ್ರಿಯಾಯೋಜನೆಗಳನ್ನು ಪುನರ್ ಪರಿಶೀಲಿಸಿ, ನೀರಿನ ಗುಣಮಟ್ಟದ ದತ್ತಾಂಶ, ಕೊಳಚೆ ನೀರು ಸಂಸ್ಕರಣಾ ಘಟಕಗಳ ವಿವರ, ಪರಿಸರ ಪ್ರವಾಹ (Ecological flow) ಸ್ಥಿತಿ ಮತ್ತು ಕಡಿಮೆ ಸಮಯ ನಿಗಧಿಪಡಿಸಿ ಪ್ರಸ್ತುತ ಸಲ್ಲಿಸಿರುವ ಕ್ರಿಯಾಯೋಜನೆಗಳನ್ನು ಮಾರ್ಪಡಿಸಿ, ಅದಕ್ಕೆ ತಗಲುವ ಅಂದಾಜು ವೆಚ್ಚದ ವಿವರಗಳೊಂದಿಗೆ ದಿನಾಂಕ:31.1.2019 ರೊಳಗೆ ಸಲ್ಲಿಸಲು ನಿರ್ದೇಶಿಸಿರುತ್ತದೆ. ಅದರಂತೆ, ನದಿ ಪುನಶ್ಚೇತನ ಸಮಿತಿಯು 2ನೇ ಬಾರಿಗೆ ದಿನಾಂಕ:28.1.2019 ರಂದು ಸಭೆ ನಡೆಸಿದೆ ಸಭೆಯ ತೀರ್ಮಾನದಂತೆ ರಾಜ್ಯದಲ್ಲಿ ಮಲಿನಗೊಂಡಿರುವ 17 ನದಿಗಳ ಪ್ರದೇಶಗಳ ನದಿ ನೀರಿನ ಪರಿಷ್ಕೃತ ಕ್ರಿಯಾ ಯೋಜನೆಗಳನ್ನು, ದಿನಾಂಕ:30.1.2019 ರಂದು ಮಾನ್ಯ ಹಸಿರು ನ್ಯಾಯ ಪೀಠ, ನವದೆಹಲಿ ಮತ್ತು ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿ, ನವದೆಹಲಿ ಇವರಿಗೆ ಸಲ್ಲಿಸಲಾಗಿದೆ.

- <u>ಇ- ತ್ಯಾಜ್ಯ:</u> ರಾಜ್ಯದಲ್ಲಿ ಕೇಂದ್ರ ಅರಣ್ಯ, ಪರಿಸರ ಹವಾಮಾನ ಬದಲಾವಣೆ ಮಂತ್ರಾಲಯವು ಪ್ರಕಟಿಸಿರುವ ಇ-ತ್ಯಾಜ್ಯ ನಿರ್ವಹಣಾ ನಿಯಮವನ್ನು ಜಾರಿಗೊಳಿಸಲಾಗಿದೆ. ರಾಜ್ಯದಲ್ಲಿ ಇ-ತ್ಯಾಜ್ಯ ನಿರ್ವಹಣೆ ಮಾಡುವ 102 ಘಟಕಗಳಿಗೆ ಮಂಡಳಿಯಿಂದ ಅನುಮತಿ ನೀಡಿದ್ದು, ಹಾಲಿ 75 ಘಟಕಗಳು ಕಾರ್ಯನಿರ್ವಹಿಸುತ್ತಿವೆ.

- <u>ಜೈವಿಕ ವೈದ್ಯಕೀಯ ತ್ಯಾಜ್ಯ:</u> ರಾಜ್ಯದಲ್ಲಿ 32,364 ಜೈವಿಕ ವೈದ್ಯಕೀಯ ತ್ಯಾಜ್ಯವನ್ನು ಉತ್ಪಾದನಾ ಮಾಡುವ ಘಟಕಗಳಿದ್ದು, ಅವುಗಳಿಂದ ಪ್ರತಿದಿನ ಅಂದಾಜು 67 ಟನ್ ಜೈವಿಕ ವೈದ್ಯಕೀಯ ತ್ಯಾಜ್ಯ ಉತ್ಪತ್ತಿಯಾಗುತ್ತಿದೆ. ಈ ಜೈವಿಕ ವೈದ್ಯಕೀಯ ತ್ಯಾಜ್ಯವನ್ನು ಸಂಸ್ಕರಿಸಿ ವಿಲೇವಾರಿ ಮಾಡಲು ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಒಟ್ಟು 26 ಸಾಮೂಹಿಕ ಸಂಸ್ಕರಣಾ ಘಟಕಗಳಿದ್ದು, ಇನ್ನೂ 4 ಘಟಕಗಳ ಸ್ಥಾಪನೆಗಾಗಿ ಮಂಡಳಿಯು ಅನುಮತಿ ನೀಡಿರುತ್ತದೆ.

- <u>ಅಪಾಯಕಾರಿ ತ್ಯಾಜ್ಯ:</u> ರಾಜ್ಯದಲ್ಲಿ ಅಪಾಯಕಾರಿ ತ್ಯಾಜ್ಯ ಉತ್ಪಾದಿಸುವ 3134 ಘಟಕಗಳನ್ನು ಗುರುತಿಸಲಾಗಿದೆ ಈ ಅಪಾಯಕಾರಿ ತ್ಯಾಜ್ಯದ ಸಂಸ್ಕರಣೆ ಮತ್ತು ಮರುಬಳಕೆಗಾಗಿ 166 ಘಟಕಗಳಿಗೆ ಅನುಮತಿ ನೀಡಲಾಗಿದೆ. ಅಪಾಯಕಾರಿ ತ್ಯಾಜ್ಯವನ್ನು ಸಿಮೆಂಟ್ ಘಟಕಗಳಲ್ಲಿ ಸುಡಲು 9 ಸಿಮೆಂಟ್ ಕಾರ್ಖಾನೆಗಳಿಗೆ ಅನುಮತಿ ನೀಡಲಾಗಿದೆ. ಅಲ್ಲದೆ 6 ಸಾಮೂಹಿಕ ಅಪಾಯಕಾರಿ ತ್ಯಾಜ್ಯ ಸುಡುವ ಘಟಕಗಳಿಗೆ ಅನುಮತಿ ನೀಡಲಾಗಿದೆ. ಭೂ-ಭರ್ತಿ ಮಾಡುವ ಅಪಾಯಕಾರಿ ತ್ಯಾಜ್ಯದ ಸಲುವಾಗಿ 2 ಘಟಕಗಳು ರಾಜ್ಯದಲ್ಲಿ ಸ್ಥಾಪನೆಯಾಗಿವೆ.

- <u>ಘನ ತ್ಯಾಜ್ಯ:</u> ಸ್ಥಳೀಯ ಸಂಸ್ಥೆಗಳು ತಮ್ಮಲ್ಲಿ ಉತ್ಪತ್ತಿಯಾಗುವ

| | | |
|---|---|---|
| | | ಘನ ತ್ಯಾಜ್ಯವನ್ನು ಘನ ತ್ಯಾಜ್ಯ ನಿರ್ವಹಣೆ ಕಾಯ್ದೆ 2016 ರನ್ವಯ ನಿರ್ವಹಿಸಲು ಕ್ರಮ ಕೈಗೊಳ್ಳಬೇಕಾಗಿದೆ. ರಾಜ್ಯದಲ್ಲಿ ಪ್ರತಿದಿನ 11,186 ಟನ್ ಕಸ ಉತ್ಪತ್ತಿಯಾಗುತ್ತಿದೆ. ರಾಜ್ಯದಲ್ಲಿರುವ 67 ಸ್ಥಳೀಯ ಸಂಸ್ಥೆಗಳು ಕಸ ವಿಲೇವಾರಿ ಘಟಕ ಸ್ಥಾಪನೆಗೆ ಸ್ಥಳ ಗುರುತಿಸಿರುವುದಿಲ್ಲ. ಅವುಗಳಲ್ಲಿ ಹೊಸದಾಗಿ ಸೇರ್ಪಡೆಯಾದ ಸ್ಥಳೀಯ ಸಂಸ್ಥೆಗಳು ಸೇರಿರುತ್ತವೆ.<br>• ಬೆಂಗಳೂರಿನಲ್ಲಿ ಕಸ ವಿಲೇವಾರಿಗಾಗಿ 9 ಘಟಕಗಳಿದ್ದು, ಅವುಗಳ ಸಂಸ್ಕರಿಸುವ ಸಾಮರ್ಥ್ಯವು ಪ್ರತಿದಿನ 3350 ಟನ್‌ಗಳಾಗಿರುತ್ತದೆ. ಬೆಂಗಳೂರಿನಲ್ಲಿ ಉತ್ಪತ್ತಿಯಾದ RDF ಅನ್ನು ಸಿಮೆಂಟ್ ಕಾರ್ಖಾನೆಗಳಲ್ಲಿ ಮರುಬಳಕೆ ಮಾಡುವಂತೆ ಮಂಡಳಿಯು ಕ್ರಮ ಕೈಗೊಂಡಿದೆ.<br>• ಸರ್ಕಾರದ ಅಧಿಸೂಚನೆ ಸಂಖ್ಯೆ: ಅಪಜೀ 316 ಇಪಿಸಿ 2015 ದಿನಾಂಕ:19.01.2016 ರಲ್ಲಿ 20 ಮತ್ತು ಮೇಲ್ಪಟ್ಟ ವಸತಿ ಸಮುಚ್ಚಯಗಳು ಹಾಗೂ 2000 ಚ.ಮೀ. ಮತ್ತು ಮೇಲ್ಪಟ್ಟ ವಿಸ್ತೀರ್ಣವುಳ್ಳ ಸಮುಚ್ಚಯಗಳಿಗೆ ಮತ್ತು ವಾಣಿಜ್ಯ ಕಟ್ಟಡಗಳಿಗೆ, 5000 ಚ.ಮೀ. ಮತ್ತು ಮೇಲ್ಪಟ್ಟ ಶೈಕ್ಷಣಿಕ ಸಂಸ್ಥೆಗಳಿಗೆ ಹಾಗೂ 10 ಎಕರೆ ಮತ್ತು ಮೇಲ್ಪಟ್ಟ ಟೌನ್‌ಶಿಪ್ & ಪ್ರದೇಶಾಭಿವೃದ್ಧಿ ಯೋಜನೆಗಳಿಗೆ ತ್ಯಾಜ್ಯ ನೀರು ಸಂಸ್ಕರಣಾ ಘಟಕಗಳ ಅಳವಡಿಕೆಯನ್ನು ಕಡ್ಡಾಯಗೊಳಿಸಲು ನಿರ್ದೇಶಿಸಲಾಗಿದೆ. ಅದರಂತೆ, ಎಲ್ಲಾ ವಸತಿ ಹಾಗೂ ವಾಣಿಜ್ಯ ಸಮುಚ್ಚಯಗಳಿಗೆ ಸಂಸ್ಕರಣಾ ಘಟಕಗಳನ್ನು ಸ್ಥಾಪಿಸುವಂತೆ ಮಂಡಳಿಯು ನೀಡುತ್ತಿರುವ ಸಮ್ಮತಿ ಪತ್ರದಲ್ಲಿ ಷರತ್ತು ವಿಧಿಸಲಾಗುತ್ತಿದೆ.<br>• ಮಂಡಳಿಯಿಂದ ನಗರಾಭಿವೃದ್ಧಿ ಇಲಾಖೆಗೆ ಘನ ತ್ಯಾಜ್ಯ ವಿಲೇವಾರಿ ಘಟಕಗಳ ಸುತ್ತ ಬಫರ್ ಜೋನ್ ನಿಗದಿಪಡಿಸಲು ಕೋರಲಾಗಿದೆ. |
| ಆ) | ಬೆಂಗಳೂರು ಮಹಾನಗರ ಪ್ರದೇಶದಲ್ಲಿ ವಾಯು ಮಾಲಿನ್ಯ ಹೆಚ್ಚಳವನ್ನು ನಿಯಂತ್ರಣದಲ್ಲಿರಿಸಲು ಸರ್ಕಾರವು ಜಾರಿಗೊಳಿಸಿರುವ ಕ್ರಿಯಾ ಯೋಜನೆಗಳು ಯಾವುವು; (ವಿವರ ನೀಡುವುದು) | • ಬೆಂಗಳೂರು ನಗರದಲ್ಲಿ ಹೆಚ್ಚುತ್ತಿರುವ ವಾಯು ಮಾಲಿನ್ಯ ತಡೆಗಟ್ಟುವ ನಿಟ್ಟಿನಲ್ಲಿ ಈ ಕೆಳಗಿನ ಮೂರು ಸಮಿತಿಗಳು ಸಕ್ರಿಯವಾಗಿ ಕಾರ್ಯನಿರ್ವಹಿಸುತ್ತಿವೆ.<br>1. ಕಾರ್ಯಪಡೆ ( Task Force Commitee)<br>2. ಸಮನ್ವಯ ಸಮಿತಿ (Co-ordination Committee)<br>3. ವಾಯು ಗುಣಮಟ್ಟ ಮಾಪನ ಸಮಿತಿ (Air Quality Monitoring Committee)<br>ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಯು ಗುರುತಿಸಿರುವ Non – attainment (ನಾನ್ ಅಟೇನ್ಮೆಂಟ್) ನಗರಗಳಲ್ಲಿ ಬೆಂಗಳೂರು ಸಹ ಒಂದಾಗಿದೆ. ಮಾನ್ಯ ಹಸಿರು ನ್ಯಾಯ ಪೀಠ, ನವದೆಹಲಿ ಯು ದಿನಾಂಕ: 8.10.2018 ರಂದು, Non –attainment (ನಾನ್ ಅಟೇನ್ಮೆಂಟ್) ನಗರಗಳಾದ ಬೆಂಗಳೂರು, ದಾವಣಗೆರೆ, ಕಲಬುರ್ಗಿ ಮತ್ತು ಹುಬ್ಬಳ್ಳಿ-ಧಾರವಾಡ ನಗರಗಳಲ್ಲಿ ವಾಯು ಮಾಲಿನ್ಯವನ್ನು |

ನಿಯಂತ್ರಿಸಲು ಸಮಗ್ರ ಕ್ರಿಯಾ ಯೋಜನೆಯನ್ನು ರೂಪಿಸಲು ರಾಜ್ಯದಲ್ಲಿ 6 ಸದಸ್ಯರನ್ನೊಳಗೊಂಡ ಸಮಿತಿಯನ್ನು ರಚಿಸಲು ಆದೇಶವನ್ನು ಹೊರಡಿಸಿದೆ. ಸದರಿ ನಿರ್ದೇಶನದಂತೆ ರಾಜ್ಯ ಸರ್ಕಾರವು ನವೆಂಬರ್ 24, 2018 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, (ಜೀವಿಪರಿಸ್ಥಿತಿ ಮತ್ತು ಪರಿಸರ)ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ 6 ಸದಸ್ಯರನ್ನೊಳಗೊಂಡ "ವಾಯು ಗುಣಮಟ್ಟ ಮಾಪನ ಸಮಿತಿ" ಯನ್ನು ರಚಿಸಿದೆ. ಸದರಿ ಸಮಿತಿಯು ದಿನಾಂಕ: 3.12.2018 ರಂದು ಸಭೆ ನಡೆಸಿ, 48 ಅಂಶಗಳ ಕರಡು ಕ್ರಿಯಾ ಯೋಜನೆಗಳನ್ನು ಸಂಬಂಧಪಟ್ಟ ಇಲಾಖೆಗಳೊಂದಿಗೆ ಚರ್ಚಿಸಿ, ಅನುಮೋದನೆಗೊಳಿಸಿತು.

ಮುಂದುವರೆದಂತೆ, ದಿನಾಂಕ: 8.10.2018 ರಂದು, ಮಾನ್ಯ ಹಸಿರು ನ್ಯಾಯ ಪೀಠ, ನವದೆಹಲಿ, ನಿರ್ದೇಶನದಂತೆ ಡಿಸೆಂಬರ್ 31, 2018 ರೊಳಗೆ ಕರಡು ಕ್ರಿಯಾ ಯೋಜನೆಗಳನ್ನು ಸಲ್ಲಿಸಬೇಕಾಗಿರುವುದರಿಂದ ಸದರಿ ಕರಡು ಕ್ರಿಯಾ ಯೋಜನೆಗಳನ್ನು ದಿನಾಂಕ. 22.12.2018 ರಂದು ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಗೆ ಸಲ್ಲಿಸಿದೆ. ಈ ಕರಡು ಕ್ರಿಯಾ ಯೋಜನೆಗಳನ್ನು, ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಯು ಮಾನ್ಯ ಹಸಿರು ನ್ಯಾಯ ಪೀಠದ ಸಮಿತಿಗೆ ಸಲ್ಲಿಸಿ, ಸಮಿತಿಯ ಅಭಿಪ್ರಾಯ ಮತ್ತು ಅನುಮೋದನೆಯನ್ನು ದಿನಾಂಕ:31.01.2019 ರೊಳಗೆ ಪಡೆಯಲು ಯೋಜಿಸಿದೆ.

ಇದಲ್ಲದೆ, ಬೆಂಗಳೂರು ನಗರದ ವಾಯು ಮಾಲಿನ್ಯ ಗುಣಮಟ್ಟವನ್ನು ಕೇಂದ್ರ ಸರ್ಕಾರದ ಪರಿಸರ ಮಂತ್ರಾಲಯದ ಯೋಜನೆಯಡಿ ಟೆರಿ (TERI) ಸಂಸ್ಥೆಯು 2007ರಲ್ಲಿ ಅಧ್ಯಯನ ನಡೆಸಿರುತ್ತದೆ. ವರದಿಯ ಪ್ರಕಾರ ಬೆಂಗಳೂರು ನಗರದಲ್ಲಿ ಪ್ರತಿ ದಿನ ಒಟ್ಟು ಉತ್ಪತ್ತಿಯಾಗುವ ಧೂಳಿನ ಕಣಗಳ (10 ಮೈಕ್ರಾನ್‌ಗಿಂತ ಕಡಿಮೆ) ಪ್ರಮಾಣ 54.4 ಟನ್‌ನಷ್ಟು ಇರುತ್ತದೆ ಇದರಲ್ಲಿ ವಿವಿಧ ವಲಯಗಳ ಪ್ರಮಾಣ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ವಲಯ | ಶೇಕಡಾವಾರು |
|---|---|---|
| 1 | ಸಾರಿಗೆ ವಲಯ | 42.0 % |
| 2 | ರಸ್ತೆ ಧೂಳು | 20.0 % |
| 3 | ಕಟ್ಟಡ ನಿರ್ಮಾಣ | 14.0 % |
| 4 | ಕೈಗಾರಿಕೆ | 14.0 % |
| 5 | ಡಿಸೇಲ್ ಜನರೇಟರ್ | 7.0 % |
| 6 | ಗೃಹಬಳಕೆ | 3.0 % |

ನಗರಗಳಲ್ಲಿ ಹೆಚ್ಚುತ್ತಿರುವ ಧೂಳಿನ ಕಣಗಳು ಮತ್ತು ವಾಯು ಮಾಲಿನ್ಯಕ್ಕೆ ಕಾರಣವಾದಂತಹ ಇತರೆ ಅಂಶಗಳನ್ನು ತಡೆಯುವ ನಿಟ್ಟಿನಲ್ಲಿ ರಾಜ್ಯ ಸರ್ಕಾರ ಮತ್ತು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿವತಿಯಿಂದ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ

| | | |
|---|---|---|
| | | • ಮಾನ್ಯ ಉಚ್ಚ ನ್ಯಾಯಾಲಯದ ನಿರ್ದೇಶನದಂತೆ, ಮಂಡಳಿಯು ಬೆಂಗಳೂರು ನಗರದಲ್ಲಿ ಹೆಚ್ಚುತ್ತಿರುವ ವಾಯು ಮಾಲಿನ್ಯ ನಿಯಂತ್ರಿಸಲು ಸಾರಿಗೆ ಇಲಾಖೆ, ಬಿ.ಬಿ.ಎಂ.ಪಿ ಹಾಗೂ ಪೋಲಿಸ್ ಇಲಾಖೆಗಳಿಗೆ ವಾಯು (ಮಾಲಿನ್ಯ ನಿವಾರಣೆ ಮತ್ತು ನಿಯಂತ್ರಣ) ಕಾಯ್ದೆ 1981 ರ ಸೆಕ್ಷನ್ 31(ಎ) ಅಡಿಯಲ್ಲಿ ಈ ಕೆಳಕಂಡ ಅಲ್ಪಾವಧಿ ಮತ್ತು ದೀರ್ಘಾವಧಿ ಕ್ರಮಗಳನ್ನು ಅನುಷ್ಠಾನಗೊಳಿಸುವಂತೆ ದಿನಾಂಕ:28.3.2014 ರಂದು ನಿರ್ದೇಶನವನ್ನು ನೀಡಿರುತ್ತದೆ.<br>1. ಭಾರಿ ವಾಹನಗಳು ನಗರದ ಒಳಗಡೆ ಬಾರದಂತೆ ನಿರ್ಬಂಧಿಸುವುದು.<br>2. ನಗರದ ಒಳಗಡೆ 2 ಸ್ಟ್ರೋಕ್ ದ್ವಿಚಕ್ರ ವಾಹನಗಳ ಬಳಕೆ ನಿಷೇಧಿಸುವುದು.<br>3. 15 ವರ್ಷಗಳ ಹಳೆಯ ವಾಹನಗಳ ಬಳಕೆಗೆ ನಿರ್ಬಂಧ ಹೇರಿರುವುದನ್ನು ಅನುಷ್ಠಾನಗೊಳಿಸುವುದು.<br>4. ಬೆಂಗಳೂರು ಕೇಂದ್ರ ವ್ಯಾಪಾರ ಜಿಲ್ಲೆಯ ಒಳಗಡೆ ಆಟೋರಿಕ್ಷಾ ಸಂಚಾರ ನಿರ್ಬಂಧಿಸುವುದು.<br>5. ಬಿ.ಬಿ.ಎಂ.ಪಿಯು ರಸ್ತೆ ಮತ್ತು ರಸ್ತೆ ಬದಿಯಲ್ಲಿ ಇರುವ ದೂಳು, ಸಿಲ್ಟ್‌ನ್ನು ಯಾಂತ್ರಿಕವಾಗಿ ಪ್ರತಿದಿನ ಕಡ್ಡಾಯವಾಗಿ ಸ್ವಚ್ಚಗೊಳಿಸುವುದು.<br>6. ರಸ್ತೆಗಳಲ್ಲಿನ ಗುಂಡಿಗಳನ್ನು ಮುಚ್ಚಿ ರಸ್ತೆಗಳನ್ನು ವ್ಯವಸ್ಥಿತವಾಗಿ ಇಡುವುದು.<br>7. ಪಾದಚಾರಿ ರಸ್ತೆಗಳ ಅತಿಕ್ರಮಣವನ್ನು ತೆರವುಗೊಳಿಸುವುದು.<br>8. ಬಹುಮಹಡಿ ವಾಹನಗಳ ನಿಲುಗಡೆ ವ್ಯವಸ್ಥೆ ಕಲ್ಪಿಸುವುದು.<br>9. ವಾಹನಗಳ ದಟ್ಟಣೆ ಹೆಚ್ಚಿಸುವಂತಹ ಸಭೆ ಸಮಾರಂಭಗಳನ್ನು ಪೋಲೀಸ್ ಇಲಾಖೆ ಪರಿಶೀಲಿಸಿ ಅನುಮತಿ ನೀಡುವುದು.<br>10. ವಾಹನ ದಟ್ಟಣೆಯನ್ನು ನಿಯಂತ್ರಿಸಲು ಸಮಗ್ರ ಅಧ್ಯಯನ ಮಾಡಿ ಕಾರ್ಯಯೋಜನೆ ರೂಪಿಸುವುದು.<br>11. ಮೀಸಲಾದ ಬಸ್ ಲೇನ್‌ಗಳ ವ್ಯವಸ್ಥೆ ಕಲ್ಪಿಸುವುದು.<br>12 ವಸತಿ ವಲಯ, ವಾಣಿಜ್ಯ ವಲಯ ಮತ್ತು ಸೂಕ್ಷ್ಮ ವಲಯಗಳ ಗಡಿ ನಿರ್ಮಿಸುವುದು ಹಾಗೂ ವಸತಿ ವಲಯವನ್ನು ವಾಣಿಜ್ಯ ವಲಯವನ್ನಾಗಿ ಪರಿವರ್ತಿಸಲು ನಿರ್ಬಂಧ ಹೇರುವುದು<br>13. ನಗರದ ಒಳಗೆ-ಹೊರಗೆ ಖಾಲಿ ಇರುವ ಜಾಗಗಳಲ್ಲಿ (ರಸ್ತೆ ಬದಿಗಳಲ್ಲಿ, ಸಾರ್ವಜನಿಕ ಉದ್ಯಾನವನಗಳಲ್ಲಿ, ಕೈಗಾರಿಕಾ ವಲಯಗಳಲ್ಲಿ ಹಾಗು ಇತ್ಯಾದಿ) ಗಿಡ ಮರಗಳನ್ನು ನೆಟ್ಟು ನಗರದ ಹಸಿರು ಪರದೆ(Green Cover) ಪ್ರಮಾಣ ಹೆಚ್ಚಿಸುವುದು. |
| ಇ) | ಶಬ್ದ ಮಾಲಿನ್ಯ ನಿಯಂತ್ರಣಕ್ಕಾಗಿ ಜಾರಿಯಲ್ಲಿರುವ ವಿವಿಧ ಕಾರ್ಯಕ್ರಮಗಳು; | • ಮಂಡಳಿಯಿಂದ ಶಬ್ದ ಮಾಪನ ಮಾಡುವುದನ್ನು ಎಲ್ಲಾ ದೊಡ್ಡ ಗಾತ್ರದ ಕೈಗಾರಿಕೆಗಳಿಗೆ ಕಡ್ಡಾಯ ಮಾಡಲಾಗಿದೆ. ಮಂಡಳಿಯು ಶಬ್ದ ಮಾಲಿನ್ಯ ನಿಯಂತ್ರಣಕ್ಕೆ ಸಂಬಂಧಿಸಿದಂತೆ, ಕೈಗಾರಿಕೆಗಳು ಸರ್ಕಾರದ ಕಾನೂನುಗಳನ್ನು ಉಲ್ಲಂಘನೆ ಮಾಡಿದ್ದಲ್ಲಿ ಕಾನೂನು ರೀತಿಯ ಕ್ರಮ |

| | | |
|---|---|---|
| | ಯಾವುವು; ಸರ್ಕಾರದ ಕಾನೂನುಗಳನ್ನು ಉಲ್ಲಂಘನೆ ಮಾಡಿರುವ ಎಷ್ಟು ಪ್ರಕರಣಗಳು ಕಳೆದ ಎರಡು ವರ್ಷಗಳಲ್ಲಿ ದಾಖಲಾಗಿವೆ;<br>(ಜಿಲ್ಲಾವಾರು ಸಂಖ್ಯೆಗಳ ವಿವರ ನೀಡುವುದು) | ಜರುಗಿಸುವ ಅಧಿಕಾರವನ್ನು ಹೊಂದಿದೆ. ಮಂಡಳಿಯು ಕಳೆದ ಎರಡು ವರ್ಷಗಳಲ್ಲಿ ಸರ್ಕಾರದ ಕಾನೂನುಗಳನ್ನು ಉಲ್ಲಂಘನೆ ಮಾಡಿರುವ 20 ಪ್ರಕರಣಗಳಲ್ಲಿ ಕ್ರಮ ಕೈಗೊಂಡಿದೆ. ಅವುಗಳ ವಿವರಗಳನ್ನು ಅನುಬಂಧ-3 ರಲ್ಲಿ ಇರಿಸಿದೆ.<br>◦ ಶಬ್ದ ಮಾಲಿನ್ಯ ನಿಯಂತ್ರಣಕ್ಕಾಗಿ ಮಂಡಳಿಯು ವತಿಯಿಂದ ಗಣೇಶ ಚತುರ್ಥಿ, ದೀಪಾವಳಿ, ಕನ್ನಡ ರಾಜ್ಯೋತ್ಸವ, ಶಿವಾಜಿ ಜಯಂತಿ, ರಾಮನವಮಿ ಮತ್ತು ಇನ್ನಿತರ ಹಬ್ಬ ಆಚರಣೆ ಸಂದರ್ಭಗಳಲ್ಲಿ ಶಬ್ದದ ತೀವ್ರತೆಯನ್ನು ಮಾಪನ ಮಾಡಲಾಗುತ್ತಿರುತ್ತದೆ. ಇದರ ಹೊರತಾಗಿ ಶಾಲಾ ಕಾಲೇಜುಗಳಲ್ಲಿ ಹಾಗೂ ಜನಸಾಮಾನ್ಯರಲ್ಲಿ ಶಬ್ದ ಮಾಲಿನ್ಯದಿಂದಾಗುವ ದುಷ್ಪರಿಣಾಮಗಳ ಬಗ್ಗೆ ಪರಿಸರ ಜಾಗೃತಿಯನ್ನು ಮೂಡಿಸಲಾಗುತ್ತಿರುತ್ತದೆ ಮತ್ತು ಈ ಸಂದರ್ಭಗಳಲ್ಲಿ ಸಿಡಿಮದ್ದುಗಳ ಬಳಕೆಯನ್ನು ಮಾಡದಂತೆ ಅರಿವು ಮೂಡಿಸಲಾಗುತ್ತಿರುತ್ತದೆ.<br>◦ ಮಂಡಳಿಯು ಬೆಂಗಳೂರಿನ 10 ನಿರಂತರ ಶಬ್ದ ಪರಿಶೀಲನಾ ಕೇಂದ್ರಗಳನ್ನು ಸ್ಥಾಪಿಸಿದೆ. ಈ ಕೇಂದ್ರಗಳು ವಾಣಿಜ್ಯ, ಕೈಗಾರಿಕಾ ವಸತಿ ಮತ್ತು ಸೂಕ್ಷ್ಮ ಪ್ರದೇಶಗಳನ್ನು ಪ್ರತಿನಿಧಿಸುತ್ತವೆ.<br>◦ ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಯು. ಪರಿಸರ ಸಂರಕ್ಷಣಾ ಕಾಯ್ದೆ 1986 ರ ಸೆಕ್ಷನ್ 5 ರ ಅಡಿಯಲ್ಲಿ ಕೈಗಾರಿಕೇತರ ಪ್ರದೇಶಗಳಲ್ಲಿ ಶಬ್ದ ಮಾಲಿನ್ಯವನ್ನು ನಿಯಂತ್ರಿಸುವ ಅಧಿಕಾರವನ್ನು ಪೊಲೀಸ್ ಇಲಾಖೆಗೆ ನೀಡಿದೆ. (ಅನುಬಂಧ-4) |

ಸಂಖ್ಯೆ: ಅಪಜೀ 52 ಇಪಿಸಿ 2019

(ಸತೀಶ್ ಜಾರಕಿಹೊಳಿ)
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು.

| 14 | To frame action plan for filling potholes and road cuttings to facilitate for smooth flow traffic | Mid | June -2019 | BBMP |
|---|---|---|---|---|
| 15 | To remove encroachment of footpath by hawkers in market place | Short | Continuous program & in progress | BBMP |
| 16. | To construct more number of multilevel vehicle parking facilities. | Long | Dec-2019 | BBMP |
| 17 | To take action to cover the construction and demolition debris carrying through trucks and create/approve facility for re-processing of C and D waste | Mid | Continuous program & in progress | BBMP |
| 18. | To suppress the dust using treated water of BWSSB by sprinkling on the roads during night times in the areas wherever dust levels are high. | Short | Continuous program & in progress | BBMP |
| 19 | Strictly implement notification No.FEE 06 ENG 2017 dated: 03.08.2017 issued by the Department of Forest, Ecology and Environment regarding prohibition of open burning of solid waste in the city. | Short | Continuous program & in progress | BBMP |
| 20 | To create green buffer along the traffic corridor/ Greening of open areas, developing gardens, greening in schools. | Mid | June -2019 | BBMP |
| 21. | To create separate Space/zone/ to handle solid waste , C&D waste and any other waste in all BBMP ward / BDA new layouts | Long | Dec-2019 | BBMP |
| 22. | Prepare plan for widening of Roads and improvement of infrastructure for decongestion of road | Long | Dec-2019 | BBMP |
| 23. | Plant specific native species which are absorbing fine dust where the pollution levels are very high viz., central silk Board, Whitefield industrial area, Mysore road and other areas. | Long | Dec-2019 | BBMP |
| 24. | To ban the entry of heavy motor vehicles within the outer ring road of Bangalore City ( Transport Engineering Department ) | Short | Continuous program & in progress | BBMP |
| 25 | KIADB to earmark adequate land in industrial areas surrounding Bangalore for the purpose of establishing the truck terminals by the Department of Transport & Road safety Department. | Long | Dec -2019 | KIADB |

| 26 | Blacktopping of notified roads including laymen of road shoulders | Long | Dec -2019 | BDA |
|---|---|---|---|---|
| 27 | To increase the green cover by planting trees in Bangalore city where empty spaces available on road sides, industries premises, public parks, etc | Mid | June -2019 | BDA |
| 28 | To establish truck terminals on all major highways leading to Bangalore | Long | Dec -2019 | BDA |
| 29. | To create separate bus bays in new proposed BBMP BDA layout and Private layouts | Long | Dec -2019 | BDA |
| 30 | To construct flyovers/under pass at congestion / highly traffic intersection of BBMP Area | Long | Dec -2019 | BDA |
| 31. | To Create water fountains in the traffic intersections like Upparpet Police stations, Corporation circle, M.G.Road, Cauvery bhavan, Vidhansoudha, K.R.Circle, Majestic, Railway stations etc to reduce the Air pollution in the traffic intersections and also it increase the aesthetic look of that place | Mid | June -2019 | BDA |
| 32 | To curb adulteration of fuel with cheap oils and solvent | Short | Continuous program & in progress | Food and Civil Supplies Department |
| 33 | To ban on sale of un-scientifically reprocessed oil in the street vendors | Mid | June -2019 | Food and Civil Supplies Department |
| 34. | Periodic check all petrol Banks established in Urban and Rural District of Bangalore and initiate action against the violators | Short | Continuous program & in progress | Food and Civil Supplies Department |
| 35 | To complete Metro Rail Route (Reach 2 & 3) as per schedule. | Long | Dec -2020 | BMRCL |
| 36. | To sweep the street using Mechanical suction vacuum cleaner where the metro construction work is under progress and sprinkle water to suppress the dust emission | Short | Continuous program & in progress | BMRCL |

| | | | | |
|---|---|---|---|---|
| 37 | To take action to cover the construction and demolition debris carrying through trucks and create/approve facility for re-processing of C and D waste. | Short | Continuous program & in progress | BMRCL |
| 38. | To remove the C & D waste this is already dumped in the lakes (Ex.Kengeri and other lakes) | Short | Initiated the work & in progress | BMRCL |
| 39. | To phase out all BS-III vehicles and to increase BS –IV fleet size of Bangalore Metropolitan Transport Corporation | Mid | June -2019 | BMTC |
| 40. | To increase the Bus service to all the satellite bus stands and last destination of BBMP area | Short | Continuous program & in progress | BMTC |
| 41. | To carryout regular vehicular emission monitoring of BMTC buses and take corrective action for meeting the tile pipe emission standards. | Short | Continuous program & in progress | BMTC |
| 42. | Induct electric buses in phase manner in Bangalore city. | Long | Dec -2019 | BMTC |
| 43. | To construct satellite bus stands at all National high ways connecting to Bangalore. | Long | Dec-2020 | KSRTC |
| 44. | To restrict the entry of KSRTC/Private buses in CBD area of Bangalore city. | Mid | June -2019 | KSRTC |
| 45. | To carryout regular vehicular emission monitoring of KSRTC buses and take corrective action for meeting the tile pipe emission standards. | Short | Continuous program & in progress | KSRTC |
| 46. | To conduct Source Apportionment Study of Bangalore (BBMP area). | Mid | June -2019 | KSPCB |
| 47. | To carryout ambient air quality monitoring of air pollutants and publish the Air Quality Index (AQI) in the website and communicate the Air Quality Status to the line departments on regular basis. | Short | Continuous program & in progress | KSPCB |
| 48. | Carryout regular monitoring of industries and initiate action against the defaulting industries. | Short | Continuous program & in progress | KSPCB |

| SL No | CASE NO AND NAME | COURT | DISTRICT | REMARKES |
|---|---|---|---|---|
| 1. | WP. No 1643/2016 Anushal Kumar Gupta V/s State of Karnataka<br>Advocate – Gururaj Joshi | High Court of Karnataka Bangalore | Bangalore | Disposed on 2/2/2017 |
| 2 | WP. No. 14052/2016 Sri Muzamil ulla Khan V/s KSPCB<br>Advocate- R.B. Satyanarayan Singh | High Court of Karnataka Bangalore | Bangalore | Disposed on 7/10/2017 |
| 3 | WP.No 114443/2016 Narayan Reddy V/s KSPCB<br>Advocate - Devendrappa | High Court of Karnataka Bangalore | Hosakote | Pending |
| 4. | WP. No.58188/2016 M. S. Ramaiah North city V/s KSPCB<br>Advocate Gururaj Joshi | High Court of Karnataka Bangalore | Bangalore | Disposed on 10/4/2017 |
| 5. | WP. No.15657/2017 Raj Kumar Pillai V/s State of Karnataka<br>Advocate Gururaj Joshi | High Court of Karnataka Bangalore | Bangalore | Pending posted for argument |
| 6. | WP. No.18671/2016 Sri N. Ashwath V/s State of Karnataka & others<br>Advocate - R.B. Satyanarayan Singh | High Court of Karnataka Bangalore | Chamarajnagar | Pending posted for argument |
| 7 | WP. No. 1871/2017 Smt. Nirmala V/s State of Karnataka<br>Advocate – Gururaj Joshi | High Court of Karnataka Bangalore | Bangalore | Pending posted for argument |
| 8 | WP. No. 27300/2018 (PIL) Malleshwaram Residents Welfare Association (R) V/s Urban Development & others<br>Advocate – Gururaj Joshi | High Court of Karnataka Bangalore | Bangalore | Pending posted for argument |
| 9 | WP. No. 43293-303/2018 (Gm-POL) Sri Sanjay Agarwal V/s State of Karnataka<br>Advocate - P. Chidanda | High Court of Karnataka Bangalore | Bangalore | Pending posted for argument |
| 10 | WP. No. 43995-005/2018 (Gm-POL) Sri Sanjay Agarwal V/s State of Karnataka<br>Advocate - P. Chidanda | High Court of Karnataka Bangalore | Bangalore | Pending posted for argument |
| 11 | WP. No. 108347/2017 Sri Dundappa Laxman Khanapeth V/s KSPCB<br>Advocate – Gurudev Gacchin Math | High Court of Karnataka Dharwad bench | Belgavi | Pending posted for argument |
| 12 | WP. No. 107396/2017 Sri Basavaraj M. Murgood V/s State of Karnataka<br>Advocate – Gurudev Gacchin Math | High Court of karnatka Dharwad bench | Gadag | Pending posted for argument |
| 13 | WP. No. 36414/2018 M/s Custom Auto Works V/s State of Karnataka<br>Advocate Smt. Mamta | High Court of Karnataka Bangalore | Mysore | Pending posted for argument |

| 14. | WP. No. 53262/2017 Mrs. H. Zeenath Unnisa V/s State of Karnataka Advocate- R.B. Satyanarayan Singh | High Court of Karnataka Bangalore | Bangalore | Pending posted for argument |
|---|---|---|---|---|
| 15 | WP. No. 31584/2017 Mr. Joseph D. Cruz (Bengalore) V/s State of Karnataka Advocate Gururaj Joshi | High Court of Karnataka Bangalore | Bangalore | Disposed on 5/12/2017 |
| 16. | WP. No. 34055/2016 (LB-BMP) V Ramalinga Reddy V/s BDA | High Court of Karnataka Bangalore | Bangalore | Pending posted for argument |
| 17 | WP. No. 58249/2018 Smt. R. Kalpana V/s State of Karnataka | High Court of Karnataka Bangalore | Bangalore | Pending posted for argument |
| 18 | WP. No. 104439/2016 Appasaheb Ramu Kumbar M/s Shree Automobiles Ltd V/s KSPCB | High Court of Karnataka Dharwad bench | Dharwad | Disposed on 5/1/2018 |
| 19. | WP. No. 36480/2016 Rajkumar Pellai V/s KSPCB | High Court of Karnataka Bangalore | Bangalore | Disposed |
| 20 | WP.NO. 44638/2016 (Gm-POL) Mohan Krishna H. V/s Union of India | High Court of Karnataka Bangalore | Bangalore | Disposed on 27/2/2017 |

Total no of cases field before Hon'ble High Court of Karnataka at Bangalore and at Dharwad bench for the last two year regarding noise pollution are 20

Total no cases disposals =7

Total no of cases pending =13

Law Officer

SPEED- POST

File No. A-14011/1/2015-MON Date: 06/02/2017

To,

The Designated Authority
(Delhi, Lucknow, Chennai, Mumbai, Navi Mumbai, Thane Kolkata, Hyderabad and Bangalore)
[List enclosed ]

DIRECTIONS UNDER SECTION 5 OF ENVIRONMENT (PROTECTION) ACT, 1986 REGARDING CONTROL OF NOISE POLLUTION.

Whereas, under Section 17 (1) (a) of the Air (Prevention and Control of Pollution) Act, 1981, one of the functions of the State Pollution Control Boards (SPCBs)/Pollution Control Committees (PCCs) is to plan a comprehensive programme for prevention, control or abatement of air pollution in the State and to secure the execution thereof.

Whereas,Under section 2(a) of Air (Prevention and Control of Pollution) Act, 1981 noise is defined as air pollutant.

Whereas, as per the Noise Pollution (Regulation and Control)Rules, 2000 of Environment (Protection) Act, 1986, the following responsibilities vested with CPCB and SPCBs:

1. The noise levels in any area/zone shall not exceed the ambient air quality standards in respect of noise as specified in the Schedule, and
2. The respective State Pollution Control Boards (SPCBs) or Pollution Control Committees (PCCs) in consultation with the Central Pollution Control Board shall collect, compile and publish technical and statistical data relating to noise pollution and measures devised for its effective prevention, control and abatement.

Whereas, Central Pollution Control Board (CPCB) has set up Real Time National Ambient Noise Monitoring Network in the year 2011 which covered 07 cities covering (Delhi, Lucknow, Chennai, Mumbai, Kolkata, Hyderabad and Bangalore).

Whereas, Based on real time noise level data during year 2011 - 2014 of 35 locations in seven cities, CPCB issued directions under Section 18 1(b) of Air (Prevention and Control of Pollution) Act, 1981, to the concerned SPCBs/PCCs on 25/04/2016.

Whereas, real time noise level data during year 2015 of 70 locations in seven cities are collated and collected by Central Pollution Control Board (CPCB) and a report on "National Ambient Noise Monitoring Network: NANMN/03/2015-16 " is published and also made available on website of CPCB i.e www.cpcb.nic.in . The real time data is also made available on website i.e. www.cpcbnoise.com.

(Continued...)

'परिवेश भवन' पूर्वी अर्जुन नगर, दिल्ली-110032
Parivesh Bhawan, East Arjun Nagar, Delhi-110032
दूरभाष/Tel : 43102030, 22305792, वेबसाईट/Website : www.cpcb.nic.in

Whereas, real time noise level data for the period of year 2016 of 70 locations in seven cities (Delhi, Mumbai, Chennai, Kolkata, Lucknow, Bangalore and Hyderabad) evaluated against the prescribed standards/limits, notified under Noise Rules, 2000 reveal violation of noise level with respect to the prescribed standards/limits in the city of

Whereas, as per the Noise Pollution (Regulation and Control)Rules, 2000 of Environment (Protection) Act, 1986, the designated authority are responsible for the enforcement of noise pollution control measures and the due compliance of the ambient air quality standards in respect of noise.

AND NOW, THEREFORE, in view of the above stated facts and realizing significance for ensuring compliance of the existing rules and to prevent further violation of noise levels with respect to prescribed standards/limit, following directions are hereby issued in exercise of the powers delegated to the Chairman, CPCB under section 5 of Environment (Protection) Act, 1986 to the designated authorities of as notified in Noise Pollution (Regulation & Control) Rules, 2000 :

The designated authorities shall take following actions to curb noise pollution in their respective zones:

1. Authorities shall ensure that driver of vehicle shall not sound the horn needlessly or continuously or more than necessary to ensure safety and in silence zones;
2. Driver shall not fit or use any multi-toned horn giving a harsh, shrill, loud or alarming noise
3. No vehicle shall be permitted to have a musical horn. All vehicles, buses, trucks and cars shall not be fitted with power, pressure or musical horns. Such vehicles with any such horns shall be challaned and such horns shall be got removed by the enforcement officer. The pressure horn or the musical/multi-toned horn of the vehicle shall be confiscated by the enforcement officer at the time of challan
4. Mass awareness programs shall be organized in schools so that use of fire crackers shall be eliminated and they are sensitized about health impacts of noise pollution.
5. Noise generating sources like public address systems, music at occasion of marriage, D.G. Sets shall be operated within prescribed limit and shall not use during night hours (after 10 P.M).
6. Eliminate the noise emitting sources like flourmills and other industrial activity from residential area.
7. Control Room will be set up to receive public grievance on Noise Pollution and these will be readdressed within reasonable time frame

[Continued...]

## List of Designated Authorities (City-wise)

| Sl. No. | City | State/UT | Designated Authority | Address |
|---|---|---|---|---|
| 1 | Hyderabad | Telangana | Addl. Commissioner of Police (Traffic) | Addl. Commissioner of Police (Traffic)<br>Hyderabad City,<br>Basheerbagh, Hyderabad |
| 2. | Bengaluru | Karnataka | Commissioner of Police(Traffic) | Additional Commissioner of Police (Traffic)<br>2nd Floor, Traffic Head Quarters,<br>Infantry Road,<br>Bengaluru - 560 001 |
| 3 | Mumbai | Maharashtra | Joint Commissioner of Police(Traffic) | Joint Commissioner of Police (Traffic)<br>Mumbai Traffic Police Headquarters,<br>Sir PochKhanwala Road,<br>Worli, Mumbai 400030 |
| 4 | Navi Mumabi | Maharashtra | Commissioner of Police (Traffic) | Commissioner of Police (Traffic)<br>Navi Mumbai,<br>Opposite RBI,<br>Sector No 10,CBD-Belapur,<br>Navi Mumbai – 400614 |
| 5. | Thane | Maharashtra | Assistant Commissioner of Police (Traffic) | Assistant Commissioner of Police (Traffic)<br>Jail Road Thane,<br>Near Old R.T.O Office, Opp Central Ground, Thane (w) - 400601 |
| 6. | Kolkata | West Bengal | Spl. Addl. CP & Jt Commissioner of Police (Traffic) | Spl. Addl. CP & Jt Commissioner of Police (Traffic)<br>Kolkata Police Head Quarters<br>18, Lalbazar Street, Kolkata - 700 001 |
| 7. | Kolkata | West Bengal | Chief Environment officer, Department of Environment (Govt. of West Bengal) | The Chief Environment officer<br>Department of Environment<br>Govt. of West Bengal<br>Poura Bhavan,<br>4th floor, FD-415/A, Sector-III,<br>Bidhannagar, Kolkata-700106 |

**ಕರ್ನಾಟಕ ಸರ್ಕಾರ**

**ಸಂಖ್ಯೆ:** ಕೌಉಜೀಇ 03 ಉಜಿಪ್ರ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ, ಬೆಂಗಳೂರು.
ದಿನಾಂಕ: 08.02.2019.

ಇಂದ,
ಕಾರ್ಯದರ್ಶಿಗಳು,
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ
ಬೆಂಗಳೂರು.

ಗೆ:
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

**ವಿಷಯ:** ವಿಧಾನ ಸಭಾ ಸದಸ್ಯರಾದ ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 289 ಗೆ ಉತ್ತರಿಸುವ ಬಗ್ಗೆ.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ವಿಧಾನ ಸಭಾ ಸದಸ್ಯರಾದ ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 289 ಕ್ಕೆ ಸಂಬಂಧಿಸಿದಂತೆ ಉತ್ತರಗಳ 150 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲಾಗಿದೆ.

ನಿಮ್ಮ ನಂಬುಗೆಯ,

(ಈರಣ್ಣ)
ಸರ್ಕಾರದ ಅಧೀನ ಕಾರ್ಯದರ್ಶಿ
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಇಲಾಖೆ.

# ಕರ್ನಾಟಕ ವಿಧಾನ ಸಭೆ

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 289 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) |
| 3) | ಉತ್ತರಿಸಬೇಕಾದ ದಿನಾಂಕ | 11.02.2019 |
| 4) | ಉತ್ತರಿಸುವವರು | ಮುಜರಾಯಿ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು |
| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
| ಅ) | ರಾಜ್ಯದಲ್ಲಿ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖಾ ವ್ಯಾಪ್ತಿಯಲ್ಲಿ ತರಬೇತಿ ನೀಡಲು ಎಷ್ಟು ತರಬೇತಿ ಕೇಂದ್ರಗಳನ್ನು ಪ್ರಾರಂಭಿಸಲಾಗಿದೆ: (ಜಿಲ್ಲಾವಾರು ಸಂಖ್ಯಾ ವಿವರ ನೀಡುವುದು) | ಜಿಲ್ಲಾವಾರು ತರಬೇತಿ ಕೇಂದ್ರಗಳ ಸಂಖ್ಯಾ ವಿವರಗಳನ್ನು ಅನುಬಂಧ-1 ರಲ್ಲಿ ನೀಡಿದೆ. |
| ಆ) | ದಕ್ಷಿಣಕನ್ನಡ ಜಿಲ್ಲೆಯ ಮೂಡಬಿದ್ರೆಯ ಬನಡ್ಕ ಎಂಬಲ್ಲಿ ಸಿದ್ಧಗೊಳಿಸಿದ ತರಬೇತಿ ಕೇಂದ್ರದ ನಿರ್ಮಾಣವನ್ನು ಯಾವಾಗ ಪ್ರಾರಂಭಿಸಲಾಯಿತು: ಅದಕ್ಕೆ ತಗುಲಿದ ಅನುದಾನ ಎಷ್ಟು: ತರಬೇತಿ ಕೇಂದ್ರ ನಿರ್ಮಾಣಗೊಂಡು ದೀರ್ಘ ಅವಧಿ ಮುಗಿದಿದ್ದರೂ ಅಲ್ಲಿ ಶಿಕ್ಷಣ ಪ್ರಾರಂಭಿಸದೇ ಇರಲು ಕಾರಣಗಳೇನು: ಯಾವಾಗ ತರಬೇತಿ ಕೇಂದ್ರ ಕಾರ್ಯಾರಂಭಗೊಳ್ಳಲಿದೆ. | ದಕ್ಷಿಣ ಕನ್ನಡ ಜಿಲ್ಲೆಯ ಮೂಡಬಿದ್ರೆಯ ಬನಡ್ಕದಲ್ಲಿ ಸರ್ಕಾರದಿಂದ ಯಾವುದೇ ತರಬೇತಿ ಕೇಂದ್ರ ನಿರ್ಮಾಣ ಮಾಡುತ್ತಿಲ್ಲ. |
| ಇ) | ವಿದ್ಯಾವಂತರು, ಅವಿದ್ಯಾವಂತರು ಮೊದಲಾಗಿ ಸರ್ವರೂ ಕೌಶಲ್ಯ ತರಬೇತಿ ಪಡೆಯುವ ಮೂಲಕ ಜೀವನೋಪಾಯ ಕಂಡುಕೊಳ್ಳಲು ನೆರವಾಗುವ ಇಂಥಹ ಕೇಂದ್ರಗಳನ್ನಾಗಿ ಮಾಡುವಲ್ಲಿ ಸರ್ಕಾರದ ಬದ್ಧತಾ ಕ್ರಮಗಳೇನು: | ಈಗಾಗಲೇ ರಾಜ್ಯಾದ್ಯಂತ ಎಲ್ಲಾ **30** ಜಿಲ್ಲೆಗಳಲ್ಲಿ ಜಿಲ್ಲಾ ಕೌಶಲ್ಯಾಭಿವೃದ್ಧಿ ಕಛೇರಿಗಳು **ಹಾಗೂ** ದಿಶಾ ಕೇಂದ್ರಗಳು ಕಾರ್ಯನಿರ್ವಹಿಸುತ್ತಿದ್ದು, ಯೋಜನೆಗಳನ್ನು ಯಶಸ್ವಿಯಾಗಿ ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗಿದೆ. |

ಈ) 2017–18 ಮತ್ತು 2018–19 ನೇ ಸಾಲಿಗಾಗಿ ಸದರಿ ಉದ್ದೇಶಿತ ಕಾರ್ಯಚಟುವಟಿಕೆಗಳಿಗೆ ಮೀಸಲಿಟ್ಟ ಅನುದಾನ ಮತ್ತು ಕೇಂದ್ರ ಸರ್ಕಾರದ ಅನುದಾನವೆಷ್ಟು (ವಿವರ ನೀಡುವುದು)?

| ಸಂಸ್ಥೆ/ಯೋಜನೆ | 2017–18 ರೂ. ಕೋಟಿಗಳಲ್ಲಿ | | 2018–19 ರೂ. ಕೋಟಿಗಳಲ್ಲಿ | |
|---|---|---|---|---|
| | ಮೀಸಲಿಟ್ಟ ಅನುದಾನ | ಕೇಂದ್ರ ಸರ್ಕಾರದ ಅನುದಾನ | ಮೀಸಲಿಟ್ಟ ಅನುದಾನ | ಕೇಂದ್ರ ಸರ್ಕಾರದ ಅನುದಾನ |
| ಸಿಎಂಕೆಕೆವೈ | 200.00 | – | – | – |
| ಪಿಎಂಕೆವಿವೈ | 21.00 | 21.00 | 21.00 | 21.00 |
| ಸಂಜೀವಿನಿ–ಕೆಎಸ್‌ಆರ್‌ಎಲ್‌ಪಿಎಸ್ | 136.58* | 104.02 | 102.00 | 55.92 |
| ಎನ್‌ಯುಎಲ್‌ಎಂ | 50.00 | 23.07 | 45.00 | – |
| ಸಿಡಾಕ್ | 5.62 | – | 8.99 | – |

*ಸಂಜೀವಿನಿ–ಕೆಎಸ್‌ಆರ್‌ಎಲ್‌ಪಿಎಸ್‌ಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರದ ಅನುದಾನ ಹಾಗೂ ರಾಜ್ಯ ಸರ್ಕಾರದ ಅನುದಾನ 60:40ದ ಪಾತದಲ್ಲಿದ್ದು, 2017–18ನೇ ಸಾಲಿನ ರಾಜ್ಯದ ಪಾಲಿನ ಅನುದಾನದ ಭಾಗವನ್ನು 2018–19ರ ಸಾಲಿನ ಪೂರಕ ಅಂದಾಜು–1ರಲ್ಲಿ ರೂ.87.81 ಕೋಟಿಗಳ ಹೆಚ್ಚುವರಿ ಅನುದಾನ ನೀಡಿ, ಬಿಡುಗಡೆ ಮಾಡಿದೆ.

ಸಂಖ್ಯೆ: ಕೌಉಜೀಇ 03 ಉಜೀಪ್ರ 2019

(ಪಿ.ಟಿ.ಪರಮೇಶ್ವರ ನಾಯ್ಕ)
ಮುಜರಾಯಿ ಹಾಗೂ ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು

ಅನುಬಂಧ -

| ಸರ್ಕಾರಿ ಹಾಗೂ ಖಾಸಗಿ ತರಬೇತಿ ಕೇಂದ್ರಗಳ ಜಿಲ್ಲಾವಾರು ಸಂಖ್ಯೆಗಳ ವಿವರ | | | | | | | | | |
|---|---|---|---|---|---|---|---|---|---|
| ಕ್ರಮ ಸಂಖ್ಯೆ | ಜಿಲ್ಲೆ | ಸಾರಿಗೆ ಇಲಾಖೆ | ಜಿಟಿಟಿಸಿ | ಕೆಜಿಟಿಟಿಐ | ಸಿಡಾಕ್ | ಡೇ-ನಲ್ಮ್ | ರುಡ್‌ಸೆಟಿ | ಸಂಜೀವಿನಿ ಸೊಸೈಟಿ (ಕೆ.ಎಸ್.ಆರ್.ಎಲ್.ಪಿ.ಎಸ್.) | ಮಾನ್ಯತೆ ಪಡೆ ಖಾಸಗಿ ತರಬೇ. ಸಂಸ್ಥೆಗಳು |
| 1 | ಬಾಗಲಕೋಟೆ | | 1 | | 1 | 29 | 1 | | 7 |
| 2 | ಬೆಳಗಾವಿ | | 2 | 1 | 1 | 20 | 1 | 4 | 9 |
| 3 | ಬಳ್ಳಾರಿ | 1 | 1 | | 1 | 12 | 1 | | 15 |
| 4 | ಬೆಂಗಳೂರು ಗ್ರಾಮೀಣ | | | | 1 | 4 | 2 | 3 | 3 |
| 5 | ಬೆಂಗಳೂರು ನಗರ | 2 | 1 | 1 | 1 | 38 | 1 | 8 | 104 |
| 6 | ಬೀದರ್ | 1 | 1 | | 1 | 10 | 1 | | 10 |
| 7 | ಚಾಮರಾಜನಗರ | | 1 | | 1 | 12 | 1 | 1 | 7 |
| 8 | ಚಿಕ್ಕಬಳ್ಳಾಪುರ | | 1 | | 1 | 5 | 1 | 2 | 5 |
| 9 | ಚಿಕ್ಕಮಗಳೂರು | 1 | 1 | | 1 | 5 | 1 | | |
| 10 | ಚಿತ್ರದುರ್ಗಾ | | | | 1 | 18 | 1 | | 16 |
| 11 | ದಕ್ಷಿಣ ಕನ್ನಡ | | 1 | 1 | 1 | 13 | 1 | 2 | 14 |
| 12 | ದಾವಣಗೆರೆ | | 1 | | 1 | 9 | 1 | 1 | 14 |
| 13 | ಧಾರವಾಡ | 1 | 1 | 1 | 1 | 8 | 1 | 2 | 19 |
| 14 | ಗದಗ | | | | 1 | 5 | 1 | 1 | 12 |
| 15 | ಹಾಸನ | 1 | 1 | | 1 | 30 | 1 | 1 | 25 |
| 16 | ಹಾವೇರಿ | | | | 1 | 20 | 1 | 1 | 24 |
| 17 | ಕೋಲಾರ | 1 | 1 | | 1 | 7 | 1 | | 20 |
| 18 | ಕೊಪ್ಪಳ | | | | 1 | 11 | 1 | | 14 |
| 19 | ಮಡಿಕೇರಿ | | | | 1 | 3 | 1 | | 1 |
| 20 | ಮಂಡ್ಯ | 1 | 1 | | 1 | 11 | 1 | | 7 |
| 21 | ಮೈಸೂರು | | 1 | | 1 | 20 | 1 | 1 | 31 |
| 22 | ರಾಯಚೂರು | | 1 | | 1 | 11 | 1 | 4 | 3 |
| 23 | ಶಿವಮೊಗ್ಗ | | 1 | | 1 | 21 | 1 | 1 | 11 |
| 24 | ತುಮಕೂರು | | 1 | | 1 | 15 | 1 | | 8 |
| 25 | ಉಡುಪಿ | | | | 1 | 8 | 1 | 2 | 3 |
| 26 | ಉತ್ತರ ಕನ್ನಡ | | 1 | | 1 | 20 | 2 | 1 | 6 |
| 27 | ವಿಜಯಪುರ | | | | 1 | 29 | 1 | 1 | 26 |
| 28 | ಯಾದಗಿರಿ | | | | 1 | 7 | 1 | 1 | 3 |
| 29 | ಕಲಬುರ್ಗಿ | | 1 | 1 | 1 | 16 | 1 | 8 | 9 |
| 30 | ರಾಮನಗರ | | 1 | | 1 | 6 | 2 | 1 | 6 |
| | ಒಟ್ಟು | 9 | 22 | 5 | 30 | 423 | 33 | 46 | 432 |

**ಕರ್ನಾಟಕ ಸರ್ಕಾರ**

ಸಂಖ್ಯೆ: ಕಾಇ 48 ಎಲ್‌ಇಟಿ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 08.02.2019

ಇವರಿಂದ:
ಸರ್ಕಾರದ ಕಾರ್ಯದರ್ಶಿಗಳು,
ಕಾರ್ಮಿಕ ಇಲಾಖೆ,
ವಿಕಾಸಸೌಧ, ಬೆಂಗಳೂರು.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ರಾಮುಲು ಬಿ. (ಮೊಳಕಾಲ್ಮೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 519ಕ್ಕೆ ಉತ್ತರಿಸುವ ಕುರಿತು.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ರಾಮುಲು ಬಿ. (ಮೊಳಕಾಲ್ಮೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 519ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

(ಜಿ.ಎಂ. ಸಿದ್ಧರಾಜು)
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ.

**ಪ್ರತಿಯನ್ನು ಮಾಹಿತಿಗಾಗಿ:**

1. ಮಾನ್ಯ ಕಾರ್ಮಿಕ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು
3. ಸರ್ಕಾರದ ಉಪ ಕಾರ್ಯದರ್ಶಿ ರವರ ಆಪ್ತ ಶಾಖೆ, ಕಾರ್ಮಿಕ ಇಲಾಖೆ, ವಿಕಾಸ ಸೌಧ.
4. ಸರ್ಕಾರದ ಉಪ ಕಾರ್ಯದರ್ಶಿರವರ ಆಪ್ತ ಸಹಾಯಕರು,(ಸಮನ್ವಯ) ಕಾರ್ಮಿಕ ಇಲಾಖೆ,
5. ಪೀಠಾಧಿಕಾರಿ-7, ಸ್ವೀಮರ ಶಾಖೆ, ಕಾರ್ಮಿಕ ಇಲಾಖೆ, ವಿಕಾಸ ಸೌಧ.

# ಕರ್ನಾಟಕ ವಿಧಾನ ಸಭೆ

| | | |
|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 519 |
| 2. | ಮಾನ್ಯ ಸದಸ್ಯರ ಹೆಸರು | ಶ್ರೀ ರಾಮುಲು ಬಿ. (ಮೊಳಕಾಲ್ಮೂರು) |
| 3. | ಉತ್ತರಿಸಬೇಕಾದ ದಿನಾಂಕ | 11/02/2019 |
| 4. | ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>2018-19ನೇ ಸಾಲಿನಲ್ಲಿ ಕಾರ್ಮಿಕ ಇಲಾಖೆಗೆ ಆಯವ್ಯಯದಲ್ಲಿ ಒದಗಿಸಿರುವ ಅನುದಾನವೆಷ್ಟು; ಆ ಪೈಕಿ ಖರ್ಚಾದ ಹಾಗೂ ಬಾಕಿ ಉಳಿದ ಅನುದಾನವೆಷ್ಟು;</td><td>
2018-19 ನೇ ಸಾಲಿನಲ್ಲಿ ಕಾರ್ಮಿಕ ಇಲಾಖೆಗೆ ಒಟ್ಟು ರೂ.10140.00 ಲಕ್ಷಗಳು ಹಂಚಿಕೆಯಾಗಿದ್ದು, ಅದರಲ್ಲಿ ಇದುವರೆಗೂ ರೂ. 8830.40 ಲಕ್ಷಗಳು ಖರ್ಚಾಗಿರುತ್ತದೆ. ಬಾಕಿ ರೂ.1309.60 ಲಕ್ಷಗಳು ಬಿಡುಗಡೆಯ ಪ್ರಕ್ರಿಯೆಯಲ್ಲಿರುತ್ತದೆ. ಉಳಿದಂತೆ, ಕಾರ್ಮಿಕ ಇಲಾಖೆಯ ಅಧೀನದಲ್ಲಿ ಬರುವ ಕೆಳಕಂಡ ಮಂಡಳಿಗಳಿಗೆ ಆಯವ್ಯಯದಲ್ಲಿ ಒದಗಿಸಿರುವ ಅನುದಾನ, ಖರ್ಚು ಹಾಗೂ ಬಾಕಿ ಅನುದಾನದ ವಿವರಗಳನ್ನು ಮಂಡಳಿವಾರು ಈ ಕೆಳಕಂಡಂತೆ ನೀಡಲಾಗಿದೆ.<br><br>
1) <u>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:</u><br><br>
ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಗೆ 2018-19ನೇ ಸಾಲಿಗೆ ರೂ.5.00 ಕೋಟಿ ಬಿಡುಗಡೆಯಾಗಿದ್ದು, ಸದರಿ ಮೊತ್ತವನ್ನು ಕಲ್ಯಾಣ ಯೋಜನೆಗಳಿಗೆ ಪೂರ್ಣ ಪ್ರಮಾಣದಲ್ಲಿ ಖರ್ಚಾಗಿದ್ದು, ಬಾಕಿ ಉಳಿದಿರುವುದಿಲ್ಲ.<br><br>
2) <u>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:</u><br>
ಮಂಡಳಿಯು ಜಾರಿಗೊಳಿಸುತ್ತಿರುವ ಯೋಜನೆಗಳಡಿ 2018-19ನೇ ಸಾಲಿನಲ್ಲಿ ಬಿಡುಗಡೆಯಾದ, ಖರ್ಚಾದ ಹಾಗೂ ಬಾಕಿ ಉಳಿದ ಅನುದಾನದ ವಿವರ ಈ ಕೆಳಕಂಡಂತಿದೆ:<br>
(ರೂ.ಲಕ್ಷಗಳಲ್ಲಿ)
<table>
<tr><th>ಯೋಜನೆಯ ಹೆಸರು</th><th>ಹಂಚಿಕೆಯಾದ ಅನುದಾನ</th><th>ಬಿಡುಗಡೆಯಾದ ಅನುದಾನ</th><th>ಖರ್ಚಾದ ಅನುದಾನ</th><th>ಬಾಕಿ ಉಳಿದ ಅನುದಾನ</th></tr>
<tr><td>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ (ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ)</td><td>2956</td><td>2217</td><td>605.78</td><td>1611.22</td></tr>
</table>
</td></tr>
</table>

| | | ಯೋಜನೆ | | | | |
|---|---|---|---|---|---|---|
| | | ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ | 1750 | 1312.50 | 308.79 | 1003.71 |
| | | ಎನ್.ಪಿ.ಎಸ್. ಲೈಟ್ ಸ್ವಾವಲಂಬನ್ ಯೋಜನೆ | 50 | 37.50 | 21.56 | 15.94 |

| | | |
|---|---|---|
| ಆ) | ಕಾರ್ಮಿಕ ಇಲಾಖೆಯಲ್ಲಿ ಬಹಳಷ್ಟು ವರ್ಷಗಳಿಂದ ಸುಮಾರು ರೂ 5,000 ಕೋಟಿ ರೂಪಾಯಿಗಳು ನಿಷ್ಪ್ರಯೋಜಕವಾಗಿ ಕೊಳೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕಾರ್ಮಿಕ ಇಲಾಖೆಯಲ್ಲಿ ಬಹಳಷ್ಟು ವರ್ಷಗಳಿಂದ ಸುಮಾರು ರೂ5,000 ಕೋಟಿ ರೂಪಾಯಿಗಳು ನಿಷ್ಪ್ರಯೋಜಕವಾಗಿ ಕೊಳೆಯುತ್ತಿರುವುದಿಲ್ಲ, ಏಕೆಂದರೆ, ಶಾಸನ ಬದ್ಧವಾಗಿ ಸಂಗ್ರಹವಾಗಿರುವ ಕಾರ್ಮಿಕ ಕಲ್ಯಾಣ ನಿಧಿಗಳನ್ನು ಕಾನೂನಿನ ಪ್ರಾವಧಾನಗಳಿಗನುಗುಣವಾಗಿ ದೂರಗಾಮಿ ಉದ್ದೇಶಗಳಿಗಾಗಿ ಸದುಪಯೋಗ ಮಾಡಬೇಕಿರುತ್ತದೆ.<br>ಕಾರ್ಮಿಕ ಇಲಾಖೆಯಲ್ಲಿ ವಿವಿಧ ಕಾರ್ಮಿಕ ಕಲ್ಯಾಣ ಹಾಗೂ ಕಾರ್ಮಿಕರ ಸಾಮಾಜಿಕ ಭದ್ರತೆಯ ಕಾನೂನಗಳಡಿಯಲ್ಲಿ ಸಂಗ್ರಹವಾಗಿರುವ ಕಾರ್ಮಿಕ ಕಲ್ಯಾಣ ನಿಧಿಗಳನ್ನು ಕಾಯ್ದೆಯ ಪ್ರಾವಧಾನಗಳಿಗನುಗುಣವಾಗಿ ವಿನಿಯೋಗಿಸಲಾಗುತ್ತದೆ. |
| ಇ) | ಬಂದಿದ್ದಲ್ಲಿ, ಈ ಅನುದಾನವನ್ನು ಸರಿಯಾಗಿ ವಿನಿಯೋಗಿಸುವಲ್ಲಿ ತಪ್ಪೆಸಗಿದ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳಲಾಗಿದೆಯೇ; | ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ (ಉದ್ಯೋಗದ ಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಕಾಯ್ದೆ 1996ರ ಕಲಂ 22 ರ ಪ್ರಾವದಾನಗಳನ್ವಯ ಸಂಗ್ರಹವಾಗಿರುವ ಸುಂಕ ನಿಧಿಯನ್ನು ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಒದಗಿಸುವ ಸಲುವಾಗಿ ಬಳಸಲು ಮಾತ್ರ ಅವಕಾಶವಿರುವುದರಿಂದ ಸುಂಕ ನಿಧಿಯ ಮೊತ್ತವು ಸದ್ಬಳಕೆಯಾಗುತ್ತಿರುತ್ತದೆ. ಈ ಹಿನ್ನೆಲೆಯಲ್ಲಿ ಅಧಿಕಾರಿಗಳ ವಿರುದ್ದ ಕ್ರಮ ಕೈಗೊಳ್ಳುವ ಪ್ರಶ್ನೆ ಉದ್ಭವಿಸುವುದಿಲ್ಲ. ಅದೇ ರೀತಿಯಾಗಿ, ಇತರ ಕಾರ್ಮಿಕ ಕಲ್ಯಾಣ ಕಾಯ್ದೆಗಳಡಿಯಲ್ಲಿ ಸಂಗ್ರಹವಾಗಿರುವ ನಿಧಿಗಳನ್ನೂ ಸಹ ಕಾರ್ಮಿಕರ ಕಲ್ಯಾಣ ಕಾರ್ಯಕ್ರಮಗಳಿಗಾಗಿ ನಿಯಮನುಸಾರ ಬಳಸಲಾಗುತ್ತಿರುವುದರಿಂದ, ಅಧಿಕಾರಿಗಳ ವಿರುದ್ದ ಕ್ರಮ ಕೈಗೊಳ್ಳುವ ಪ್ರಶ್ನೆ ಉದ್ಭವಿಸುವುದಿಲ್ಲ. |
| ಈ) | ಇಷ್ಟು ದೊಡ್ಡ ಮೊತ್ತ ಸದರಿ ಇಲಾಖೆಯಲ್ಲಿ ಉಳಿದಿರುವುದಕ್ಕೆ ಕಾರಣಗಳೇನು;<br>(ವಿವರ ನೀಡುವುದು) | ಮಂಡಳಿಯ ಸೌಲಭ್ಯಗಳು ಘಟನಾಧಾರಿತವಾಗಿದ್ದು, ಘಟನೆ ಸಂಭವಿಸಿದ ನಂತರ ಫಲಾನುಭವಿಗಳು ನಿಗಧಿತ ಅರ್ಜಿ ಮತ್ತು ತತ್ಸಂಬಂಧ ದಾಖಲೆಗಳನ್ನು ಸೌಲಭ್ಯ ಮಂಜೂರಾತಿ ಅಧಿಕಾರಿಗಳಾದ ಆಯಾ ಕಾರ್ಮಿಕ ಅಧಿಕಾರಿ / ಸಹಾಯಕ ಕಾರ್ಮಿಕ ಆಯುಕ್ತರಿಗೆ ನೇರವಾಗಿ ಸಲ್ಲಿಸಿ ಸೌಲಭ್ಯ ಪಡೆಯಲು ಅವಕಾಶ ಕಲ್ಪಿಸಲಾಗಿರುತ್ತದೆ. ರಾಜ್ಯದಲ್ಲಿರುವ |

| | | |
|---|---|---|
| | | ಕೋಟ್ಯಾಂತರ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತೆಗಾಗಿ ಭವಿಷ್ಯದಲ್ಲಿ ಇನ್ನೂ ಹೆಚ್ಚಿನ ನಿಧಿಯ ಅವಶ್ಯಕತೆ ಇದ್ದು, ಪ್ರಸಕ್ತದಲ್ಲಿ ಸಂಗ್ರಹವಾಗಿರುವ ನಿಧಿಯು ಕಾರ್ಮಿಕರ ಬೃಹತ್ ಸಂಖ್ಯೆಯನ್ನು ಪರಿಗಣಿಸಿದಾಗ ಕಡಿಮೆ ಪ್ರಮಾಣದ್ದಾಗಿರುತ್ತದೆ.<br><br>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ನೋಂದಣಿಯಾಗಿರುವ ಫಲಾನಿಭವಿಗಳ ಕಲ್ಯಾಣ ಮತ್ತು ಸಾಮಾಜಿಕ ಭದ್ರತೆಗಾಗಿ ವಿವಿಧ ಸೌಲಭ್ಯಗಳನ್ನು ರೂಪಿಸಲಾಗಿದ್ದು, ವಿವರಗಳನ್ನು **ಅನುಬಂಧ-1** ರಲ್ಲಿ ಒದಗಿಸಿದೆ. 2007 ರಿಂದ ಡಿಸೆಂಬರ್-2018 ರವರೆಗೆ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳಿಗೆ ಖರ್ಚಾಗಿರುವ ಮೊತ್ತದ ವಿವರವನ್ನು **ಅನುಬಂಧ-2**ರಲ್ಲಿ ಒದಗಿಸಿದೆ. |
| ಉ) | ಸದರಿ ಇಲಾಖೆಯಲ್ಲಿ ಉಳಿದಿರುವ ಈ ಮೊತ್ತವನ್ನು ಮುಂದಿನ ದಿನಗಳಲ್ಲಿ ಕಾರ್ಮಿಕರ ಏಳಿಗೆಗಾಗಿ ವಿನಿಯೋಗಿಸಲು ಯಾವ ಕಾರ್ಯಕ್ರಮಗಳನ್ನು ರೂಪಿಸಲಾಗುವುದು? (ವಿವರ ನೀಡುವುದು) | ದಿನಾಂಕ: 18-01-2019ರಂದು ನಡೆದ ಮಂಡಳಿಯ ಸಭೆಯಲ್ಲಿ ಹೊಸ ಯೋಜನೆಗಳು ಮತ್ತು ಕಾರ್ಯಕ್ರಮಗಳನ್ನು ರೂಪಿಸಲಾಗಿದ್ದು ಮುಂದಿನ ದಿನಗಳಲ್ಲಿಯೂ ಸಹ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಏಳಿಗೆಗಾಗಿ ಮಂಡಳಿಯ ಸುಂಕ ನಿಧಿಯನ್ನು ಸದ್ವಿನಿಯೋಗ ಪಡಿಸಿಕೊಳ್ಳಲಾಗುವುದು. ಹೊಸ ಕಾರ್ಯಕ್ರಮಗಳ ವಿವರವನ್ನು **ಅನುಬಂಧ-3**ರಲ್ಲಿ ನೀಡಲಾಗಿದೆ.<br><br>ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತೆಗಾಗಿ, ಲಭ್ಯವಿರುವ ನಿಧಿ ಹಾಗೂ ಮುಂದೆ ಸಂಗ್ರಹವಾಗಬಹುದಾದ ನಿಧಿಗಳ ಮೊತ್ತವನ್ನು ಮತ್ತು ಕಾರ್ಮಿಕರ ಸಂಖ್ಯೆಗಳನ್ನು ಗಮನದಲ್ಲಿಟ್ಟುಕೊಂಡು, ಕಾನೂನಿನ ಪ್ರಾವಧಾನಗಳಿಗನುಗುಣವಾಗಿ ಸರ್ಕಾರವು ಕಾರ್ಮಿಕರ ಸರ್ವೋತೋಮುಖ ಅಭಿವೃದ್ಧಿಗಾಗಿ ಕಾರ್ಯಕ್ರಮಗಳನ್ನು ರೂಪಿಸುತ್ತದೆ. |

**ಕಾಇ 48 ಎಲ್‌ಇಟಿ 2019**

(ವೆಂಕಟರಮಣಪ್ಪ)
ಕಾರ್ಮಿಕ ಸಚಿವರು

## ಅನುಬಂಧ-1

## ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು

1. **ಪಿಂಚಣಿ ಸೌಲಭ್ಯ: ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ** ಮಾಸಿಕ ರೂ.1,000/-
2. **ದುರ್ಬಲತೆ ಪಿಂಚಣಿ:** ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ **ರೂ.1,000/-** ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ **ರೂ.2,00,000/-**ದವರೆಗೆ ಅನುಗ್ರಹ ರಾಶಿ ಸಹಾಯಧನ.
3. **ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ)** : ರೂ.20,000/-ವರೆಗೆ
4. **ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ):** ರೂ.2,00,000/-ದವರೆಗೆ ಮುಂಗಡ ಸೌಲಭ್ಯ
5. **ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್):** ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ **ರೂ. 30,000/-** ಮತ್ತು ಗಂಡು ಮಗುವಿನ ಜನನಕ್ಕೆ **ರೂ.20,000/-**
6. **ಅಂತ್ಯಕ್ರಿಯೆ ವೆಚ್ಚ : ರೂ.4,000/-** ಹಾಗೂ ಅನುಗ್ರಹ ರಾಶಿ **ರೂ.50,000/-**ಸಹಾಯಧನ
7. **ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:**
   i) 1, 2 ಹಾಗೂ 3ನೇ ತರಗತಿಯಲ್ಲಿ ಉತ್ತೀರ್ಣರಾದವರಿಗೆ **ರೂ. 2,000/-**
   ii) 4, 5 ಹಾಗೂ 6ನೇ ತರಗತಿಯಲ್ಲಿ ಉತ್ತೀರ್ಣರಾದವರಿಗೆ **ರೂ. 3,000/-**
   iii) 7 ಹಾಗೂ 8ನೇ ತರಗತಿ ಉತ್ತೀರ್ಣರಾದವರಿಗೆ **ರೂ. 4,000/-**
   iv) 9, 10 ನೇ ತರಗತಿ ಹಾಗೂ ಪ್ರಥಮ ಪಿಯುಸಿ ಉತ್ತೀರ್ಣರಾದವರಿಗೆ **6,000/-**
   v) ದ್ವಿತೀಯ ಪಿ.ಯು.ಸಿ ಉತ್ತೀರ್ಣರಾದವರಿಗೆ **ರೂ. 8,000/-**
   vi) ಐಟಿಐ ಮತ್ತು ಡಿಪ್ಲೋಮಾ ಉತ್ತೀರ್ಣರಾದವರಿಗೆ ಪ್ರತಿ ವರ್ಷಕ್ಕೆ **ರೂ. 7,000/-**
   vii) ಪದವಿ ಉತ್ತೀರ್ಣರಾದವರಿಗೆ ಪ್ರತಿ ವರ್ಷಕ್ಕೆ **ರೂ. 10,000/-**
   viii) ಸ್ನಾತಕೋತ್ತರ ಪದವಿ ಸೇರ್ಪಡೆಗೆ **ರೂ. 20,000/-** ಹಾಗೂ ಪ್ರತಿ ವರ್ಷ **ರೂ.10,000/-**ಗಳಂತೆ (ಎರಡು ವರ್ಷಗಳಿಗೆ)
   ix) ಇಂಜಿನಿಯರಿಂಗ್ ಕೋರ್ಸ್‌ಗೆ ಸೇರ್ಪಡೆಗೆ **ರೂ.25,000/-** ಹಾಗೂ ಪ್ರತಿ ವರ್ಷ ತೇರ್ಗಡೆಗೆ **ರೂ.20,000/-**
   x) ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ **ರೂ.30,000/-** ಹಾಗೂ ಪ್ರತಿ ವರ್ಷ ತೇರ್ಗಡೆಗೆ **ರೂ.25,000/-**
   xi) ಪಿಹೆಚ್‌ಡಿ ಕೋರ್ಸ್‌ಗೆ ಪ್ರತಿ ವರ್ಷಕ್ಕೆ **ರೂ.20,000/-** (ಗರಿಷ್ಠ ಎರಡು ವರ್ಷಗಳು) ಮತ್ತು ಪಿಹೆಚ್‌ಡಿ ಪ್ರಬಂಧ ಸ್ವೀಕಾರದ ನಂತರ ಹೆಚ್ಚುವರಿಯಾಗಿ **ರೂ.20,000/-**

**ಪ್ರತಿಭಾವಂತ ಮಕ್ಕಳಿಗಾಗಿ:**

(a) ಎಸ್.ಎಸ್‌ಎಲ್.ಸಿ ಅಥವಾ ತತ್ಸಮಾನ ತರಗತಿಯಲ್ಲಿ ಶೇ.75 ಅಂಕ ಪಡೆದವರಿಗೆ **ರೂ.5,000/-**

(b) ಪಿಯುಸಿ ಅಥವಾ ತತ್ಸಮಾನ ತರಗತಿಯಲ್ಲಿ ಶೇ.75 ಅಂಕ ಪಡೆದವರಿಗೆ **ರೂ.7,000/-**

(c) ಪದವಿ ಅಥವಾ ತತ್ಸಮಾನ ಕೋರ್ಸ್‌ನಲ್ಲಿ ಶೇ.75 ಅಂಕ ಪಡೆದವರಿಗೆ **ರೂ.10,000/-**

(d) ಸ್ನಾತಕೋತ್ತರ ಪದವಿ ಅಥವಾ ತತ್ಸಮಾನ ಕೋರ್ಸ್‌ನಲ್ಲಿ ಶೇ.75 ಅಂಕ ಪಡೆದವರಿಗೆ **ರೂ.15,000/-**

8. **ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ)**: ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಭಿತರಿಗೆ **ರೂ.300/-** ರಿಂದ **ರೂ.10,000/-ವರೆಗೆ**
9. **ಅಪಘಾತ ಪರಿಹಾರ**: ಮರಣ ಹೊಂದಿದ್ದಲ್ಲಿ **ರೂ.5,00,000/-**, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ **ರೂ.2,00,000/- ಮತ್ತು** ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ **ರೂ.1,00,000/-**
10. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ)**: ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯುಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಸಾಮಾನ್ಯ ಶಸ್ತ್ರಚಿಕಿತ್ಸೆಗಳಿಗೆ **ರೂ.2,00,000/-ವರೆಗೆ**
11. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್)**: ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ **ರೂ.50,000/-**
12. **ಐಕಲು ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ)**: ಅನಿಲ ಸಂಪರ್ಕದೊಂದಿಗೆ ಎರಡು ಬರ್ನರ್ ಸ್ಟೌವ್
13. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ**: ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ
14. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ**: ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು
    ಮಕ್ಕಳಿಗೆ
15. **ತಾಯಿ ಮಗು ಸಹಾಯ ಹಸ್ತ**: ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ ರೂ.6,000/-ಗಳ ಸಹಾಯಧನ

ಅನುಬಂಧ-2

| ಸೌಲಭ್ಯಗಳ ವಿವರ | 2007-08 ರಿಂದ 2012-13 ರವರೆಗೆ | | 2013-14 ರಿಂದ 2017-18 ರವರೆಗೆ | | 2018-19 ರಲ್ಲಿ (ಏಪ್ರಿಲ್ ರಿಂದ ಜನವರಿ ರವರೆಗೆ) | | ಒಟ್ಟು | |
|---|---|---|---|---|---|---|---|---|
| | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| ಶೈಕ್ಷಣಿಕ ಧನಸಹಾಯ | 10,896 | 27,679,600 | 2,27,489 | 103,81,26,292 | 79,624 | 449,407,265 | 318,009 | 1,515,213,157 |
| ಮದುವೆ ಧನಸಹಾಯ | 2,126 | 15,160,000 | 23,514 | 116,14,15,000 | 8,522 | 416,225,000 | 34,162 | 1,592,800,000 |
| ಅಂತ್ಯ ಸಂಸ್ಕಾರಕ್ಕೆ ವೆಚ್ಚ | 1,376 | 20,921,000 | 6368 | 32,84,54,619 | 1,982 | 105,077,850 | 9,726 | 454,453,469 |
| ಪ್ರಮುಖ ವೈದ್ಯಕೀಯ | 233 | 8,404,269 | 2282 | 6,39,82,540 | 495 | 11,634,289 | 3,000 | 83,721,098 |
| ಅಪಘಾತ ಪರಿಹಾರ | 195 | 14,777,740 | 185 | 2,55,74,260 | 52 | 12,381,000 | 432 | 52,733,000 |
| ಹೆರಿಗೆ ಧನಸಹಾಯ | 365 | 2,192,000 | 1677 | 2,47,21,500 | 514 | 8,425,000 | 2,556 | 35,338,500 |
| ವೈದ್ಯಕೀಯ ವೆಚ್ಚ | 779 | 742,750 | 268 | 5,65,048 | 184 | 5,143,404 | 1,231 | 6,451,202 |
| ಉಪಕರಣ ಖರೀದಿಗೆ ಸಾಲ | 3 | 14,890 | 17 | 85,000 | 0 | 0 | 20 | 99,890 |
| ಪಿಂಚಣಿ ಸೌಲಭ್ಯ | 0 | 0 | 759 | 91,31,000 | 407 | 9,615,000 | 1,163 | 18,746,000 |
| ದುರ್ಬಲತೆ ಪಿಂಚಣಿ | 0 | 0 | 11 | 16,08,000 | 5 | 870,000 | 16 | 2,478,000 |
| ಅನಿಲ ಭಾಗ್ಯ | 0 | 0 | 0 | 66,00,00,000 | 0 | 0 | 0 | 660,000,000 |
| ಶ್ರಮ ಸಾಮರ್ಥ್ಯ | 0 | 0 | 0 | 8,39,95,481 | 0 | 56,972,953 | 0 | 140,968,434 |
| ಬಿಎಂಟಿಸಿ ಬಸ್ ಪಾಸ್ | 0 | 0 | 0 | 5,24,79,000 | 0 | 0 | 0 | 52,479,000 |
| ವಿಶೇಷ ನೋಂದಣಿ ಅಭಿಯಾನ | 0 | 0 | 0 | 3,32,89,686 | 0 | 33,211,901 | 0 | 66,501,587 |
| ಕ್ಲೈಂ ಅರ್ಜಿಗಳ ಮಂಜೂರಾತಿಗಾಗಿ ಮುಂಗಡ ಬಿಡುಗಡೆ | 0 | 0 | 0 | 0 | 0 | 363,563,718 | 0 | 363,563,718 |
| ಒಟ್ಟು | 15,973 | 8,95,98,249 | 2,62,560 | 348,34,27,426 | 91,785 | 1,472,527,380 | 370,315 | 5,045,547,055 |

ಅನುಬಂಧ-3

## ಹೊಸ ಯೋಜನೆಗಳು

**1. ಮರಣ /ದೈಹಿಕ ದುರ್ಬಲತೆ ಸೌಲಭ್ಯ:**

- ನಿರ್ಮಾಣ ಸ್ಥಳಗಳಲ್ಲಿ ಅಪಘಾತದಿಂದ ಕಾರ್ಮಿಕರು ಮೃತ ಪಟ್ಟರೆ ಮಂಡಳಿಯಿಂದ ರೂ.1 ಲಕ್ಷ ಗಳ ಪರಿಹಾರವನ್ನು ನೀಡುವುದು. (ಮಾಲೀಕರು ನೀಡುವ ಪರಿಹಾರ ಹೊರತು ಪಡಿಸಿ)
- ಸ್ವಾಭಾವಿಕ ಮರಣ ಪ್ರಕರಣಗಳಲ್ಲಿ ಪ್ರಸ್ತುತ ನೀಡುತ್ತಿರುವ ಸಹಾಯಧನವನ್ನು ರೂ.50,000/-ಗಳಿಂದ ರೂ. 2 ಲಕ್ಷಕ್ಕೆ ಹೆಚ್ಚಿಸುವುದು.
- ಅಂತ್ಯಕ್ರಿಯೆ ವೆಚ್ಚ ರೂ. 4,000/-ಗಳಿಂದ ರೂ. 20,000/-ಗಳವರೆಗೆ ಹೆಚ್ಚಿಸುವುದು
- ದುರ್ಬಲತೆ ಸೌಲಭ್ಯ: ನೊಂದಾಯಿತ ಫಲಾನುಭವಿಗಳು ಅಪಘಾತದಿಂದ ದೈಹಿಕ ನ್ಯೂನತೆ ಹೊಂದಿದ್ದಲ್ಲಿ ಅಂತಹ ಕಾರ್ಮಿಕರಿಗೆ ದುರ್ಬಲತೆಯ ಪ್ರಮಾಣಕ್ಕೆ ಅನುಗುಣವಾಗಿ ಈ ಕೆಳಗಿನಂತೆ ಸೌಲಭ್ಯವನ್ನು ನೀಡುವುದು.

(೨) ಶೇ.75 ಕ್ಕಿಂತ ಮೇಲ್ಪಟ್ಟು ರೂ.2 ಲಕ್ಷ

(೨) ಶೇ.50 ರಿಂದ ಶೇ:75 ರೂ.1 ಲಕ್ಷ

(೩) ಶೇ.25 ರಿಂದ ಶೇ.50 ರೂ.50,000/-ಗಳು

- ದುರ್ಬಲತೆಯ ಪಿಂಚಣಿ ಮೊತ್ತವನ್ನು ರೂ. 1,000/-ಗಳಿಂದ ರೂ. 2,000/-ಕ್ಕೆ ಹೆಚ್ಚಿಸುವುದು.

**2. ಆರೋಗ್ಯ ಸೌಲಭ್ಯಗಳು ಸಹಾಯ ಧನ:**

(೦): **ವೃತ್ತಿ ಸಂಬಂಧಿತ ಕಾಯಿಲೆಗಳ ಸೌಲಭ್ಯಗಳು:** ವೃತ್ತಿಗೆ ಸಂಬಂಧಪಟ್ಟ ಪ್ರಮುಖ ಕಾಯಿಲೆಗಳ ಚಿಕಿತ್ಸೆಗಾಗಿ ವೈದ್ಯಕೀಯ-ಸೌಲಭ್ಯವನ್ನು ಪಡೆಯಲು ಈಗಾಗಲೇ ಗುರುತಿಸಲಾಗಿರುವ ಕಾಯಿಲೆಗಳೊಂದಿಗೆ ಕೆಳಕಂಡ ಕಾಯಿಲೆಗಳನ್ನು ಸೇರ್ಪಡೆಗೊಳಿಸಿ ವೈದ್ಯಕೀಯ ಸಹಾಯ ಧನ ನೀಡುವುದು.

1. Occupational Dermatitis
2. Occupational Cancer
3. Asbestosis
4. Silicosis
5. Lead poisoning
6. Benzene poisoning
7. Occupational Asthma
8. Toxic Jaundice
9. Caisson's Disease (compressed Air Illness)
10. Noise induced hearing loss
11. Toxic Nephritis

### (B) ವೈದ್ಯಕೀಯ ಪರಿಕರಗಳ ಸೌಲಭ್ಯಗಳು:

ನೊಂದಾಯಿತ ಫಲ್ಲಾನುಭವಿಗಳು ಕೆಲಸದ ಕಾರಣದಿಂದ ವಿವಿಧ ರೀತಿಯ ನ್ಯೂನತೆಗಳನ್ನು ಹೊಂದಿದಾಗ ಅವರ ಅನುಕೂಲಕ್ಕಾಗಿ ಕೆಳಕಂಡ ಸೌಲಭ್ಯಗಳನ್ನು ನೀಡುವುದು.

| ಕ್ರ.ಸಂ | ಪರಿಕರಗಳು | ಮೊತ್ತ ರೂ.ಗಳಲ್ಲಿ (ಮರುಪಾವತಿ) |
|---|---|---|
| 1. | ಕನ್ನಡಕ | 1,000 |
| 2. | ಕೃತಕ ಹಲ್ಲು / ಹಲ್ಲು ಅಳವಡಿಕೆ | 10,000 |
| 3. | ಶ್ರವಣ ಸಾಧನ | 7,500 |
| 4. | ಕೃತಕ ಕಾಲು | 20,000 |
| 5. | Elbow Crutch/ Tripod Walking Stick | 1,500 |
| 6. | ಸ್ವಯಂ ಚಾಲಿತ ಗಾಲಿ ಕುರ್ಚಿ (Manual wheel chair) | 12,000 |

**(ಅ) ಸಾಮಾನ್ಯ ಶಸ್ತ್ರ ಚಿಕಿತ್ಸಾ ಸೌಲಭ್ಯ:**

ರೂ. 1 ಲಕ್ಷದಿಂದ ರೂ. 1.5 ಲಕ್ಷದವರೆಗೆ ಹೆಚ್ಚಿಸುವುದು. ಈ ಸೌಲಭ್ಯವನ್ನು ಪಡೆಯಲು ಚಿಕಿತ್ಸೆಯನ್ನು ರಾಜ್ಯದ ಸರ್ಕಾರಿ ಆಸ್ಪತ್ರೆ ಅಥವಾ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ಅನುಸೂಚಿ-1 ರಲ್ಲಿ ಸೇರ್ಪಡೆಯಾಗಿರುವ ಖಾಸಗಿ ಆಸ್ಪತ್ರೆಗಳಲ್ಲಿ ಪಡೆದಿರಬೇಕು.

**(ಆ) ಕಾರ್ಮಿಕ ವಿಕಲಚೇತನ ಸಹಾಯ:**

ಕಟ್ಟಡ ಕಾರ್ಮಿಕರ ದೈಹಿಕ ಮತ್ತು ಮಾನಸಿಕ ವಿಕಲ ಚೇತನರಾಗಿರುವ ಇಬ್ಬರು (02) ಮಕ್ಕಳಿಗೆ ಅವರ ಪಾಲನೆ ಮತ್ತು ಪೋಷಣೆಗಾಗಿ ವಾರ್ಷಿಕ ರೂ.24,000/- ದಂತೆ ಮಕ್ಕಳು 21 ವರ್ಷ ವಯಸ್ಸಿನವರೆಗೆ ನೀಡುವುದು. ಈ ಸೌಲಭ್ಯವು ವಿಕಲಚೇತನ ಪಿಂಚಣಿ ಸೌಲಭ್ಯವನ್ನು ಹೊರತುಪಡಿಸಿರುತ್ತದೆ.

### 3. ಶೈಕ್ಷಣಿಕ ಮತ್ತು ಕೌಶಲ್ಯ ಸೌಲಭ್ಯಗಳು: (ಕಲಿಕಾ ಭಾಗ್ಯ ಮತ್ತು ಕೌಶಲ್ಯ ಭಾಗ್ಯ)

ಪ್ರಸ್ತುತ ಮಂಡಳಿಯಿಂದ ನೊಂದಾಯಿತ ಕಟ್ಟಡ ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಸಹಾಯಧನವನ್ನು ನೀಡಲಾಗುತ್ತಿದ್ದು ಸಹಾಯಧನದ ಮೊತ್ತದಲ್ಲಿ ಹೆಚ್ಚಳ ಮತ್ತು ನೂತನ ಶೈಕ್ಷಣಿಕ ಸಹಾಯ ಧನ ನೀಡುವುದು.

| ಕ್ರ.ಸಂ | ತರಗತಿ / ಕೋರ್ಸ್ | ವಾರ್ಷಿಕ ಮೊತ್ತ ರೂ.ಗಳಲ್ಲಿ | | | ನೂತನ / ಹೆಚ್ಚಳ |
|---|---|---|---|---|---|
| | | ಪ್ರಸ್ತುತ ನೀಡುತ್ತಿರುವ ಸೌಲಭ್ಯದ ವಿವರ | ಪರಿಷ್ಕರಿಸಿರುವ ಮೊತ್ತ | | |
| | | | ಗಂಡು | ಹೆಣ್ಣು | |
| 1 | ಪೂರ್ವ ಪ್ರಾಥಮಿಕ ಶಾಲೆ /ನರ್ಸರಿ ಪ್ರವೇಶ | -- | 2000 | 2500 | ನೂತನ |
| 2 | 1 ರಿಂದ 3ನೇ ತರಗತಿ ಉತ್ತೀರ್ಣ | 2000 | 3000 | 4000 | ಹೆಚ್ಚಳ |

| 3 | 4 ರಿಂದ 5 ನೇ ತರಗತಿ ಉತ್ತೀರ್ಣ | 3000 | 3000 | 4000 | ಹೆಚ್ಚಳ |
|---|---|---|---|---|---|
| 4 | 6 ತರಗತಿ ಉತ್ತೀರ್ಣ | 3000 | 5000 | 6000 | ಹೆಚ್ಚಳ |
| 5 | 7ನೇ ಮತ್ತು 8ನೇ ತರಗತಿ ಉತ್ತೀರ್ಣ | 4000 | 5000 | 6000 | ಹೆಚ್ಚಳ |
| 6 | 9 ಮತ್ತು 10ನೇ ತರಗತಿ ಉತ್ತೀರ್ಣ | 6000 | 7500 | 10000 | ಹೆಚ್ಚಳ |
| 7 | ಪ್ರಥಮ ಪಿಯುಸಿ ಉತ್ತೀರ್ಣ | 6000 | 10000 | 14000 | ಹೆಚ್ಚಳ |
| 8 | ದ್ವಿತೀಯ ಪಿ.ಯು.ಸಿ ಉತ್ತೀರ್ಣ | 8000 | 10000 | 14000 | ಹೆಚ್ಚಳ |
| 9 | ಐ.ಟಿ.ಐ ಉತ್ತೀರ್ಣ | 7000 | 12000 | 15000 | ಹೆಚ್ಚಳ |
| 7 | ಪದವಿ ಉತ್ತೀರ್ಣ | 10000(ಪ್ರತಿ ವರ್ಷ ತೇರ್ಗಡೆಗೆ) | 15000 | 20000 | ಹೆಚ್ಚಳ |
| 8 | ಸ್ನಾತ್ನಕೋತ್ತರ ಪದವಿ ಉತ್ತೀರ್ಣ | 20000 (ಸೇರ್ಪಡೆ) 10000 (ಪ್ರತಿವರ್ಷ) | 20000 | 25000 | ಹೆಚ್ಚಳ |
| 9 | ಇಂಜಿನಿಯರಿಂಗ್ (ಬಿಇ / ಬಿಟೆಕ್) | 25000(ಸೇರ್ಪಡೆ) 20000(ಪ್ರತೀ ವರ್ಷ ತೇರ್ಗಡೆ) | 25000 | 30000 | ಹೆಚ್ಚಳ |
| 10 | ವೈದ್ಯಕೀಯ (ಎಂ.ಬಿ.ಬಿ.ಎಸ್) | 30000(ಸೇರ್ಪಡೆ) 25000((ಪ್ರತಿ ವರ್ಷ ತೇರ್ಗಡೆಗೆ)) | 40000 | 50000 | ಹೆಚ್ಚಳ |
| 11 | ಪಾಲಿಟೆಕ್ನಿಕ್ (ಡಿಪ್ಲೊಮೊ) | 7000 | 15000 | 20000 | ಹೆಚ್ಚಳ |
| 12 | ಎಂಟೆಕ್/ ಎಂಇ | -- | 30000 | 35000 | ನೂತನ |
| 13 | ಎಂ.ಡಿ | -- | 45000 | 55000 | ನೂತನ |
| 14 | ಪಿ.ಹೆಚ್‌ಡಿ | 20000 (ಪ್ರತಿವರ್ಷಕ್ಕೆ ಗರಿಷ್ಠ 2 ವರ್ಷ) | 25000 | 30000 | ಹೆಚ್ಚಳ |
|  | ಪಿ.ಎಚ್‌ಡಿ ಪ್ರಬಂಧ ಸ್ವೀಕಾರ | 20000 |  |  |  |
| 15 | ಅಲ್ಪಾವದಿ ಕೌಶಲ್ಯ ವೃತ್ತಿಗಳು (ಕನಿಷ್ಠ 100 ಗಂಟೆಗಳು) | -- | ಪ್ರತಿ 100 ಗಂಟೆಗೆ 1500 ಶಿಷ್ಯವೇತನ | ಪ್ರತಿ 100 ಗಂಟೆಗೆ 2000 ಶಿಷ್ಯವೇತನ | — ನೂತನ |

**4. ಸ್ವ-ಉದ್ಯೋಗ ಸಹಾಯ ಧನ (ಶ್ರಮಿಕ ಸಂಸಾರ ಸಹಾಯ):**

ನೋಂದಾಯಿತ ಕಾರ್ಮಿಕರ ಮಕ್ಕಳಲ್ಲಿ ಸ್ವಯಂ ಉದ್ಯೋಗವನ್ನು ಉತ್ತೇಜಿಸುವ ದೃಷ್ಠಿಯಿಂದ ಶ್ರಮಿಕ ಸಂಸಾರ ಸಹಾಯ ಸೌಲಭ್ಯವನ್ನು ಹೊಸದಾಗಿ ಪರಿಚಯಿಸುತ್ತಿದ್ದು ಇದರಡಿ ರೂ.50,000/- ಗಳ ಬಡ್ಡಿರಹಿತ ಸಹಾಯ ಧನದ ಸೌಲಭ್ಯವನ್ನು ಇಬ್ಬರು ಮಕ್ಕಳಿಗೆ ರಾಷ್ಟ್ರೀಕೃತ ಬ್ಯಾಂಕುಗಳ ಮೂಲಕ ನೀಡಲಾಗುವುದು. ಕಟ್ಟಡ ಕಾರ್ಮಿಕರ / ಪಿಂಚಣಿದಾರರ / ಕುಟುಂಬ ಪಿಂಚಣಿ ಪಡೆಯುತ್ತಿರುವವರ 18 ರಿಂದ 35 ವರ್ಷ ವಯಸ್ಸಿನ ಇಬ್ಬರು ಮಕ್ಕಳಿಗೆ ಸಹಾಯ ಧನವನ್ನು ನೀಡಲಾಗುವುದು. ಈ ಮೊತ್ತವನ್ನು 05 ವರ್ಷಗಳಲ್ಲಿ ಮರುಪಾವತಿಸಲು ಅವಕಾಶವಿದ್ದು ಈ ಮೊತ್ತವನ್ನು ಬ್ಯಾಂಕ್‌ನವರು ವಸೂಲಾತಿ ಮಾಡಿ ಮಂಡಳಿಗೆ ಜಮೆ ಮಾಡುವುದು.

**5. ಪಿಂಚಣಿ ಸೌಲಭ್ಯ:**

1. 60 ವರ್ಷ ಪೂರೈಸಿ ಕನಿಷ್ಠ 03 ವರ್ಷಗಳು ನಿರಂತರವಾಗಿ ಫಲಾನುಭವಿಯಾಗಿ ಮುಂದುವರೆದಿರುವ ಕಾರ್ಮಿಕರಿಗೆ ರೂ.1000/- ರಿಂದ ರೂ.2000/- ಗಳಿಗೆ ಹೆಚ್ಚಳ.

2. ಫಲಾನುಭವಿಯ ನಾಮ ನಿರ್ದೇಶಿತರಿಗೆ ಮಾಸಿಕ ರೂ.1000/- ಗಳ ಕುಟುಂಬ ಪಿಂಚಣಿ ನೀಡುವುದು.

**6. ಡಿಜಿಟಲ್ ಕಾರ್ಮಿಕ ಸಹಾಯ:**

ನೋಂದಣಿಯಾಗಿ 01 ವರ್ಷ ಆಗಿರುವ 50 ವರ್ಷದೊಳಗಿನ ಕಟ್ಟಡ ಕಾರ್ಮಿಕರಿಗೆ ಕೆನರಾ ಬ್ಯಾಂಕ್ ವತಿಯಿಂದ 'ಕಾರ್ಮಿಕ ಕ್ಯಾಶ್ ಕಾರ್ಡ್' ಅನ್ನು ಉಚಿತವಾಗಿ ನೀಡುವುದು.

**7. ಶೌಚಾಲಯ ನಿರ್ಮಾಣ ಸಹಾಯ ಧನ:**

ನೋಂದಾಯಿತ ಕಟ್ಟಡ ಕಾರ್ಮಿಕರು ಸ್ವಂತ ಮನೆ ಇದ್ದು ಶೌಚಾಲಯ ಇಲ್ಲದಿದ್ದಲ್ಲಿ ಶೌಚಾಲಯ ನಿರ್ಮಾಣ ಮಾಡಿಕೊಂಡಲ್ಲಿ ಅದಕ್ಕೆ ರೂ.15,000/- ಗಳ ಮರುಪಾವತಿ ಮಾಡುವುದು. ಗೃಹ ಭಾಗ್ಯ ಯೋಜನೆ ಸೌಲಭ್ಯ ಮತ್ತು ಕೇಂದ್ರ / ರಾಜ್ಯ ಸರ್ಕಾರದ ವಸತಿ ಯೋಜನೆಯಲ್ಲಿ ಸೌಲಭ್ಯ ಪಡೆದಿರುವವರು ಈ ಯೋಜನೆಗೆ ಅರ್ಹರಿರುವುದಿಲ್ಲ. ಜೊತೆಗೆ ಪತಿ ಪತ್ನಿ ಇಬ್ಬರೂ ಫಲಾನುಭವಿಗಳಾಗಿದ್ದಲ್ಲಿ ಯಾರಾದರೂ ಒಬ್ಬರು ಮಾತ್ರ ಈ ಸೌಲಭ್ಯ ಪಡೆಯಬಹುದು. ಇದನ್ನು ಎರಡು ಹಂತದಲ್ಲಿ ನೀಡಲಾಗುತ್ತದೆ.

ಕರ್ನಾಟಕ ಸರಕಾರ

**ಸಂಖ್ಯೆ: ಕಂಇ 20 ಡಬ್ಲ್ಯೂಬಿಆರ್ 2019**

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:07.02.2019.

**ಇವರಿಂದ:**

ಸರ್ಕಾರದ ಕಾರ್ಯದರ್ಶಿಗಳು,
ಕಂದಾಯ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

**ಮಾನ್ಯರೆ,**

**ವಿಷಯ:** ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಲಾಲಾಜಿ ಆರ್ ಮೆಂಡನ್ (ಕಾಪು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 731ಕ್ಕೆ ಉತ್ತರ.

*******

ಪ್ರಸ್ತಾವಿತ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನಸಭೆ ಸದಸ್ಯರಾದ ಶ್ರೀ ಲಾಲಾಜಿ ಆರ್ ಮೆಂಡನ್ (ಕಾಪು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 731ಕ್ಕೆ ಉತ್ತರಗಳ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಜಗದೀಶ ಕೆ)
ಶಾಖಾಧಿಕಾರಿ
ಕಂದಾಯ ಇಲಾಖೆ
(ಭೂ ಸುಧಾರಣಾ ಕೋಶ).

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 75
ಸದಸ್ಯರ ಹೆಸರು : ಶ್ರೀ ಲಾಲಾಜಿ ಆರ್ ಮೆಂಡನ್ (ಕಾಪು)
ಉತ್ತರಿಸಬೇಕಾದ ಸಚಿವರು : ಕಂದಾಯ ಸಚಿವರು
ಉತ್ತರಿಸುವ ದಿನಾಂಕ : [illegible].02.2019

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಉಡುಪಿ ಜಿಲ್ಲೆಯ ಕಾಪುವನ್ನು ಹೊಸದಾಗಿ ತಾಲ್ಲೂಕು ಕೇಂದ್ರವನ್ನಾಗಿ ಘೋಷಣೆ ಮಾಡಿದ್ದು, ಈ ತಾಲ್ಲೂಕು ಕೇಂದ್ರದಲ್ಲಿ ಮಿನಿ ವಿಧಾನಸೌಧ ಮಂಜೂರು ಮಾಡದೇ ಇರುವುದಕ್ಕೆ ಕಾರಣವೇನು; | ಉಡುಪಿ ಜಿಲ್ಲೆಯ ಕಾಪು ತಾಲೂಕಿನಲ್ಲಿ ಮಿನಿ ವಿಧಾನ ಸೌಧ ಕಟ್ಟಡ ನಿರ್ಮಾಣದ ಕುರಿತು ರೂ.10.00 ಕೋಟಿಗಳ ಅಂದಾಜು ಪಟ್ಟಿ ಮತ್ತು ನಕ್ಷೆಯೊಂದಿಗಿನ ಪ್ರಸ್ತಾವನೆಯು ಸರ್ಕಾರದಲ್ಲಿ ಸ್ವೀಕೃತವಾಗಿದ್ದು, ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಸರ್ಕಾರದ ಪರಿಶೀಲನೆಯಲ್ಲಿದೆ. |
| ಆ) | ಹಾಗಿದ್ದಲ್ಲಿ 2019-20 ನೇ ಸಾಲಿನ ಆಯವ್ಯಯದಲ್ಲಿ ಕಾಪು ತಾಲ್ಲೂಕು ಕೇಂದ್ರದಲ್ಲಿ ಮಿನಿ ವಿಧಾನಸೌಧ ಕಟ್ಟಡ ನಿರ್ಮಾಣ ಮಾಡಲು ಅನುದಾನ ನಿಗದಿಗೊಳಿಸಲಾಗುವುದೇ? (ವಿವರ ನೀಡುವುದು) | |

[illegible]

(ಆರ್.ವಿ. ದೇಶಪಾಂಡೆ)
ಕಂದಾಯ ಸಚಿವರು